ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕನ್ನಡ ವಿಶ್ವವಿದ್ಯಾಲಯ, ಹಂಪಿ



ನಿರ್ದೇಶಕರು, ಕಾವ್ಯಮಂಡಲ, ಬೆಂಗಳೂರು .

## ಸಂಶೋಧನಾ ಕಿರು ಪ್ರಬಂಧ

# ವಿಷಯ - ಆಧುನಿಕ ಮಹಿಳಾ ಕಾವ್ಯ : ಸ್ತ್ರೀ ಸಂವೇದನೆಯ ನೆಲೆಗಳು

ಎಂ. ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಕಿರುಪ್ರಬಂಧ


ಸಿದ್ಧಪಡಿಸಿದವರು

**ಅರುಣಕುಮಾರಿ ಬಿ.ಎನ್**

ಎಂ.ಫಿಲ್. ವಿದ್ಯಾರ್ಥಿನಿ
ಕನ್ನಡ ವಿಭಾಗ
ಹಂಪಿ ಕನ್ನಡ ವಿ.ವಿ.
ಕಾವ್ಯ ಮಂಡಲ
ಬೆಂಗಳೂರು

ಮಾರ್ಗದರ್ಶಕರು

**ಡಾ.ಕೆ.ಆರ್. ಸಂಧ್ಯಾರೆಡ್ಡಿ**

ಅಧ್ಯಕ್ಷರು
ಕನ್ನಡ ಲೇಖಕಿಯರ ಸಂಘ
ಚಾಮರಾಜಪೇಟೆ
ಬೆಂಗಳೂರು





**2006-07**

204

# ಕನ್ನಡ ವಿಶ್ವವಿದ್ಯಾಲಯ, ಹಂಪಿ



ನಿರ್ದೇಶಕರು, ಕಾವ್ಯಮಂಡಲ, ಬೆಂಗಳೂರು .

# ವಿಷಯ - ಆಧುನಿಕ ಮಹಿಳಾ ಕಾವ್ಯ : ಸ್ತ್ರೀ ಸಂವೇದನೆಯ ನೆಲೆಗಳು

ಎಂ. ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಕಿರುಪ್ರಬಂಧ


ಸಿದ್ಧಪಡಿಸಿದವರು

**ಅರುಣಕುಮಾರಿ ಬಿ.ಎನ್**

ಎಂ.ಫಿಲ್. ವಿದ್ಯಾರ್ಥಿನಿ
ಕನ್ನಡ ವಿಭಾಗ
ಹಂಪಿ ಕನ್ನಡ ವಿ.ವಿ.
ಕಾವ್ಯ ಮಂಡಲ
ಬೆಂಗಳೂರು

ಮಾರ್ಗದರ್ಶಕರು

**ಡಾ.ಕೆ.ಆರ್. ಸಂಧ್ಯಾರೆಡ್ಡಿ**

ಅಧ್ಯಕ್ಷರು
ಕನ್ನಡ ಲೇಖಕಿಯರ ಸಂಘ
ಚಾಮರಾಜಪೇಟೆ
ಬೆಂಗಳೂರು


**2006-07**

# ಘೋಷಣಾ ಪತ್ರ

"ಆಧುನಿಕ ಮಹಿಳಾ ಕಾವ್ಯ : ಸ್ತ್ರೀ ಸಂವೇದನೆಯ ನೆಲೆಗಳು" ಎಂಬ ಶೀರ್ಷಿಕೆಯ ಸಂಶೋಧನಾ ಕಿರು ಪ್ರಬಂಧವನ್ನು 2006-2007 ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಲ್ಲಿಸಿರುತ್ತೇನೆ. ಅದನ್ನು ನಾನು ಸ್ವ ಸಾಮರ್ಥ್ಯದಿಂದ ಡಾ. ಕೆ.ಆರ್. ಸಂಧ್ಯಾರೆಡ್ಡಿ ಇವರ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದೇನೆ.

ಈ ಸಂಶೋಧನಾ ಪ್ರಬಂಧವು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ : ಬೆಂಗಳೂರು.

ದಿನಾಂಕ : 6/08/07.

ಸಂಶೋಧನಾ ವಿದ್ಯಾರ್ಥಿನಿ

Aruni. B.N.

ಅರುಣಕುಮಾರಿ. ಬಿ.ಎನ್.

ಎಂ.ಫಿಲ್. ವಿದ್ಯಾರ್ಥಿನಿ

ಕನ್ನಡ ವಿಶ್ವವಿದ್ಯಾಲಯ (ಹಂಪಿ)

(ಕಾವ್ಯ ಮಂಡಲ, ಬೆಂಗಳೂರು)

# ದೃಢೀಕರಣ ಪತ್ರ

***"ಆಧುನಿಕ ಮಹಿಳಾ ಕಾವ್ಯ : ಸ್ತ್ರೀ ಸಂವೇದನೆಯ ನೆಲೆಗಳು"*** ಎಂಬ ಶೀರ್ಷಿಕೆಯ ಈ ಸಂಶೋಧನಾ ಕಿರು ಪ್ರಬಂಧವನ್ನು **ಅರುಣಕುಮಾರಿ. ಜಿ.ಎನ್.** 2006-07 ನೇ ಸಾಲಿನ **ಎಂ.ಫಿಲ್** ಪದವಿಗಾಗಿ ಸಲ್ಲಿಸುತ್ತಿರುವ ಈ ಕಿರು ಪ್ರಬಂಧವನ್ನು ಸ್ವಂತ ಅವರೇ ಸಿದ್ಧಪಡಿಸಿದ್ದಾರೆ. ಇದರಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಪ್ರಬಂಧಕಾರರವು. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ದೃಢಿಕರಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : 6.8.2007

ಮಾರ್ಗದರ್ಶಕರು

ಕೆ. ಆರ್. ಸಂಧ್ಯಾರೆಡ್ಡಿ

**ಡಾ. ಕೆ.ಆರ್. ಸಂಧ್ಯಾರೆಡ್ಡಿ**

ಅಧ್ಯಕ್ಷರು

ಕನ್ನಡ ಲೇಖಕಿಯರ ಸಂಘ,

ಚಾಮರಾಜಪೇಟೆ

ಬೆಂಗಳೂರು.

# ಪರಿವಿಡಿ

# ಅಧ್ಯಾಯ- 1

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆಧುನಿಕ ಮಹಿಳಾ ಕಾವ್ಯ ಕನ್ನಡ ಕಾವ್ಯ ಕ್ಷೇತ್ರದ ಏಕಮುಖವಾದ ಪುರುಷ ಪ್ರಜ್ಞೆಯ ಪ್ರವಾಹವನ್ನು ಅದರ ದಿಕ್ಕನ್ನು ಒಂದಿಷ್ಟು ಬೇರೆಯ ಕಡೆಗೆ ಬದಲಿಸಿದೆ. ಎಂಬ ಮಾತಿನ ಹಿನ್ನೆಲೆಯಲ್ಲಿ ಮಹಿಳಾ ಕಾವ್ಯವನ್ನು ಬೇರೆ ಬೇರೆ ನೆಲೆಗಳಲ್ಲಿ ವಿಶ್ಲೇಷಿಸುವ ಒಂದು ಚಿಕ್ಕ ಅಧ್ಯಯನ ಇಲ್ಲಿದೆ.

ಸುಮಾರು 1975 ರಿಂದೀಚೆಗೆ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಕವಯತ್ರಿಯರ ಸಂಖ್ಯೆ ಗಮನಾರ್ಹವಾಗಿ ಹೆಚ್ಚಿದೆ. ಇದುವರೆಗೆ ನಮಗೆ ತಿಳಿಯದ ಹೆಣ್ಣಿನ ಅಂತರಂಗದ ಜಗತ್ತಿನ ಅಭಿವ್ಯಕ್ತಿ ಇಲ್ಲಿದೆ ಎಂಬಕಾರಣಕ್ಕಾಗಿ ಇದಕ್ಕೆ ವಿಶೇಷ ಮಹತ್ವ ದೊರೆತಿದೆ. ಕವಯತ್ರಿಯರಿಗೆ ಕಾವ್ಯ ಒಂದು ಸಾಹಿತ್ಯಿಕ ಹವ್ಯಾಸವಾಗದೆ ಅಂತರಂಗದ ಅನಿಸಿಕೆಗಳನ್ನು ವ್ಯಕ್ತ ಪಡಿಸುವ ಮಾಧ್ಯಮವಾಗಿದೆ. ಮತ್ತು ಅಸ್ತಿತ್ವದ ಹುಡುಕಾಟದ ಮಾದ್ಯಮವೂ ಆಗಿದೆ. ಹೀಗೆ ವಿಶಿಷ್ಟವಾದ ಒಂದು ಸಂವೇದನೆಯಿಂದ ಕವಿತೆಯ ಮೂಲಕ ಜಗತ್ತನ್ನು ನೋಡುವ ಬಗೆಯನ್ನು ಹಾಗೂ ಪರಂಪರಾಗತವಾಗಿ ತಮ್ಮ ಬಗ್ಗೆ ರೂಪಿತವಾದ ಚಿತ್ರವನ್ನು ಪುನರ್ವಿಮರ್ಶಿಸಿವ ರೀತಿಯನ್ನು ಇಲ್ಲಿ ಪ್ರಮುಖವಾಗಿ ಕಾಣಬಹುದು.

ಬಹುತೇಕ ಕವಿತೆಗಳು ಅವರ ಮಾನಸಿಕ ತೊಳಲಾಟಗಳನ್ನು ಅವರ ಆಸೆ ಆಂಕಾಂಕ್ಷೆ ನಿರೀಕ್ಷೆಗಳನ್ನು ಹೇಳುವಂಥವು. ಹೆಣ್ಣಾದ ಕಾರಣದಿಂದಲೇ ಈ ಬದುಕು, ಕುಟುಂಬ, ಸಮಾಜಿಕ ವ್ಯವಸ್ಥೆಯಲ್ಲಿ ತಮ್ಮದಲ್ಲರ ಬದುಕನ್ನು ತಾವು ಬದುಕಬೇಕಾಗಿದೆ ಎಂಬುದನ್ನು ಪ್ರಾಮಾಣಿಕವಾಗಿ ನಿವೇದಿಸಿಕೊಳ್ಳುವ ಜೀವನ ಪ್ರೀತಿಯನ್ನು ಉಳಿಸಿಕೊಂಡೆ ಸ್ತ್ರೀಯರು ಇಲ್ಲಿದ್ದಾರೆ ಪ್ರತಿಯೊಬ್ಬ ಕವಯತ್ರಿಯೂ ತಾನು ಯಾವ ನೆಲೆಯಿಂದಲೇ ಬಂದಿರಲಿ ತನ್ನ ಬದುಕಿನ ಅನುಭವಗಳು ಏನೇ ಇರಲಿ ಹೆಣ್ಣು ಹಾಗೂ ಹೆಣ್ಣಿನ ಬದುಕು ಆಕೆಯ ಮುಖ್ಯ ಕಾಳಜಿಯಾಗಿದೆ. ಹೆಣ್ಣು - ಗಂಡಿನ ಸಂಬಂಧ ಕುರಿತಂತೆ ಸಮಾಜದ ದ್ವಂದ್ವ ನೀತಿಗಳು ಪ್ರೀತಿ, ಪ್ರೇಮ, ಪ್ರಣಯದಂತಹ ಮಧುರ ಭಾವನೆಗಳು, ವಿರಹ, ನಿರೀಕ್ಷೆ ಆತಂಕ ತಲ್ಲಣಗಳು, ದಾಂಪತ್ಯ ಸಂಬಂಧಗಳು , ಇವೇ ಮೊದಲಾದವು ಇವರ ಕವಿತೆಗಳ ಮುಖ್ಯ ವಸ್ತು, ಸಾಮಾಜಿಕ ವಿಷಯವನ್ನು ಕುರಿತು ಬರೆಯುವಾಗಲೂ ಸಮಾಜ ಹೆಣ್ಣನ್ನು ಹೇಗೆ ನೋಡುತ್ತದೆ ಎಂಬುದೇ ಅವರ ಮುಖ್ಯ ಕಾಳಜಿಯಾಗಿದೆ. ಇಲ್ಲಿಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕವಯತ್ರಿಯರು ತಮ್ಮ ಕವಿತೆಗಳ ಮೂಲಕ ಇಡೀ ಸ್ತ್ರೀ ಸಮುದಾಯದ ಅಂತರಂಗದ ಜಗತ್ತನ್ನು ಎಳೆ ಎಳೆಯಾಗಿ ಬಿಡಿಸುತ್ತಿದ್ದಾರೆ. ಎಂಬುದು ಹೆಣ್ಣಾಗಿ ಬದುಕನ್ನು, ತಮ್ಮ ನೈತಿಕತೆಗಳನ್ನು ಕುರಿತ ಅನನ್ಯ ಚಿತ್ರಣ ಇಲ್ಲಿ ಮಾತ್ರವೇ ಸಿಗುತ್ತದೆ. ಹೆಣ್ಣು ಹೇಗೆ ಇರುತ್ತಾಳೆ, ಹೇಗೆ ಇರಬೇಕು. ಎಂಬ ಪರಂಪರಾಗತ ನಿರೀಕ್ಷೆಗಳಿಗೆ ಭಿನ್ನವಾದ ಹೆಣ್ಣು ಇರುವುದನ್ನು ಈ ಕವಿತೆಗಳು ಸಮರ್ಥವಾಗಿ ಬಿಂಬಿಸಿವೆ.

ಈ ಮೇಲಿನ ಅಂಶಗಳಿಂದ ನನ್ನ ಎಂ.ಫಿಲ್ ಪದವಿಗಾಗಿ "**ಆಧುನಿಕ ಮಹಿಳಾ ಕಾವ್ಯ : ಸ್ತ್ರೀ ಸಂವೇದನೆಯ ನೆಲೆಗಳು**" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಹಂಪಿ ಕನ್ನಡ ವಿಶ್ವವಿದ್ಯಾಲಯ ಹಂಪಿ (ಕಾವ್ಯ ಮಂಡಲ, ಬೆಂಗಳೂರು) ಇಲ್ಲಿಗೆ ನನ್ನಕಿರುಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

1975 ರಿಂದೀಚೆಗೆ ಬರೆಯುತ್ತಿರುವ ಲೇಖಕಿಯರಲ್ಲಿ ಭಿನ್ನ ನೆಲೆಗಳು ಆಲೋಚನಾ ಕ್ರಮಗಳಿರುವುದು ಮುಖ್ಯವಾದ ಅಂಶ. ಲೇಖಕಿಯರ ವಯೋಮಾನ, ಬೆಳೆದು ಬಂದ ಪರಿಸರ, ಸಮುದಾಯ, ಸಮಾಜದೊಂದಿಗೆ ತಮ್ಮನ್ನು ತಾವು ಕಂಡು ಕೊಂಡ ರೀತಿ, ವಿಭಿನ್ನ ಆಲೋಚನೆ ಮತ್ತು ದೃಷ್ಟಿ ಕೋನಗಳ ಒಟ್ಟಾರೆ ಅಂಶಗಳಿಂದ ಅವರ ಕಾವ್ಯಗಳಲ್ಲಿ ಮೂಡಿಬಂದಂತಹ ಸ್ತ್ರೀ ಸಂವೇದನೆಯ ನೆಲೆಗಳು ಯಾವ ಬಗೆಯವು ಎಂಬುದನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ.

ಸ್ತ್ರೀ ಸಂವೇದನೆ ಎಂಬುದು ಒಂದೇ ನೆಲೆಗಟ್ಟನ್ನು ಪಡೆದುದಲ್ಲ. ಇದು ಭಿನ್ನ ಮನಸ್ಥಿತಿಗಳ ಆಲೋಚನೆಯ ಒಟ್ಟಾರೆ ಅಂಶ. ಶೋಷಿತ ಸಮುದಾಯದಲ್ಲಿ ಹುಟ್ಟಿ ಬಂದ ಹೆಣ್ಣು ಮಗಳು ಪ್ರತಿಬಿಂಬಿಸುವ, ಬದುಕಿಗೂ ಇತರ ನೆಲೆಗಳ ಸ್ತ್ರೀಯರ ಬದುಕಿನಲ್ಲೂ ಕವಿತೆಗಳಿಗೂ ಭಿನ್ನತೆ ಗುತಿಸಬಹುದಾದರೂ ಸಹ ಎಲ್ಲಾ ಕವಿತೆಗಳಲ್ಲೂ ಸ್ತ್ರೀ ಜೀವನದ ಚಿತ್ರ ಸಾಮಾನ್ಯವಾಗಿ ಕಂಡು ಬರುತ್ತದೆ. ಆದ್ದರಿಂದ ನನ್ನ ಅಧ್ಯಯನದ ಸೀಮಿತತೆಯ ದೃಷ್ಟಿಯಿಂದ ಸುಮಾರು 1975 ರಿಂದೀಚೆಗೆ ಬಂದ ಹತ್ತು ಲೇಖಕಿಯರ ಲಭ್ಯವಿರುವ ಕವನ ಸಂಕಲನಗಳಲ್ಲಿ ವ್ಯಕ್ತವಾದ ಸ್ತ್ರೀ ಸಂವೇದನೆಯ ಸ್ವರೂಪವನ್ನು ಕುರಿತು ಅಭ್ಯಾಸಿಸ ಹೊರಟಿದ್ದೇನೆ.

ಶಶಿಕಲಾ ವೀರಯ್ಯಸ್ವಾಮಿ, ಸವಿತಾ ನಾಗಭೂಷಣ್, ಮಾಲತಿ ಪಟ್ಟಣ ಶೆಟ್ಟಿ, ಹೇಮಾ ಪಟ್ಟಣ ಶೆಟ್ಟಿ, ಡಾ. ಕೆ.ಆರ್. ಸಂಧ್ಯಾರೆಡ್ಡಿ , ಹೆಚ್. ಎಲ್. ಪುಷ್ಪ, ದು. ಸರಸ್ವತಿ, ಮಮತಾ ಜಿ. ಸಾಗರ, ಪ್ರತಿಭಾ, ನಂದ ಕುಮಾರ್, ಬಿ.ಟಿ. ಲಲಿತಾನಾಯಕ್,ಮೊದಲಾದವರ ಕವಿತೆಗಳಲ್ಲಿ ವ್ಯಕ್ತವಾಗಿರುವ ಸ್ತ್ರೀ ಸಂವೇದನೆಯ ಅಂಶ ಮತ್ತು ಆಶಯಗಳಿಗೆ ನನ್ನ ವ್ಯಾಪ್ತಿ ವಿಸ್ತರಿಸಿದ್ದೇನೆ.

**ಆಧುನಿಕ ಮಹಿಳಾ ಕಾವ್ಯ : ಸ್ತ್ರೀ ಸಂವೇದನೆಯ ನೆಲೆಗಳು ಎಂಬ ವಿಷಯದಲ್ಲಿ 5 ಅಧ್ಯಾಯಗಳಿವೆ.**

1) ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

2) ಮಹಿಳೆ : ಸ್ತ್ರೀವಾದ - ಸ್ತ್ರೀ ಸಂವೇದನೆ

3) ಕೆಲವು ಕವಯತ್ರಿಯರ ಕವಿತಾ ಸಂಕಲನಗಳು

4) ಮಹಿಳಾ ಕಾವ್ಯ : ಕವಯತ್ರಿಯರ ಆಂತರಿಕ ಜಗತ್ತು ಮತ್ತು ಅಸ್ತಿತ್ವದ ಹುಡುಕಾಟ

5) ಸಮಾರೋಪ

ಎಂದು ಐದು ಅಧ್ಯಾಯಗಳನ್ನು ಒಳಗೊಂಡ ನನ್ನ ಈ ಕಿರು ಪ್ರಬಂಧದಲ್ಲಿ ಕವಯತ್ರಿಯರ ಕವಿತಾ ಸಂಕಲನಗಳಲ್ಲಿ ವ್ಯಕ್ತವಾದ ಸ್ತ್ರೀ ಸಂವೇದನೆಗಳು ದಟ್ಟ ಪ್ರತಿ ಬಿಂಬವನ್ನು ಸಮರ್ಥವಾಗಿ ಬೆಳಸಿಕೊಂಡು ನನ್ನ ಅಧ್ಯಯನವನ್ನು ಕೈಗೊಂಡಿದ್ದೇನೆ.

# ಅಧ್ಯಾಯ- 2

## ಮಹಿಳೆ ಸ್ತ್ರೀವಾದ - ಸ್ತ್ರೀ ಸಂವೇದನೆ

**ಮಹಿಳೆ :** ಯತ್ರ ನಾರ್ಯಂತು ಪೂಜ್ಯಂತೇ , ರಮಂತೇ ತತ್ರ ದೇವತಾ :

ಎಂಬ ವೇದ ಕಾಲೀನ ಮಾತು ಇಂದು ಆಧುನಿಕ ಯುಗದ ಮಹಿಳೆಗೆ ಎಷ್ಟರ ಮಟ್ಟಿಗೆ ಹೊಂದಿಕೆಯಾಗಿದೆ? ಎಂಬುದು ಎಲ್ಲರಲ್ಲೂ ಇರುವ ಮುಖ್ಯ ಪ್ರಶ್ನೆ. ಇಂತಹ ಸ್ವಾಂತತ್ರ್ಯ ಬಯಸುವ ಮಾತು ಪ್ರಾಚೀನ ಕಾಲದಲ್ಲೇ ಮೂಡಿ ಬಂದರೂ ಸಹ, ಜೊತೆಯಾಗಿ ಸ್ವಾತಂತ್ರ್ಯವನ್ನು ನಿರಾಕರಿಸಿದ ಹಿಂದೂ ಧರ್ಮ ನಸ್ತ್ರೀ ಸ್ವಾಂತತ್ರ್ಯ ಮರ್ಹತಿ ಎಂಬುದನ್ನು ಪ್ರತಿಬಿಂಬಿಸುತ್ತಾ ಮಹಿಳೆಯನ್ನು ದಾಸ್ಯದ ಸಂಕೋಲೆಯಲ್ಲೇ ಬಂದಿಸುವ ಒಂದು ಕ್ರಿಯೆಯನ್ನು ಪಾರಂಪರಿಕವಾಗಿ ಮುಂದುವರೆಸಿಕೊಂಡು ಬಂದಿರುವುದನ್ನು ನೋಡಬಹುದು.

ಹೆಣ್ಣನ್ನು ದೈವತ್ವಕ್ಕೇರಿಸಿರುವ ಪೂರ್ವಜರಿಂದ - ಆಧುನಿಕರವರೆಗೆ ತೆಗೆದುಕೊಂಡರೂ ಸಹ ಪುರುಷ ವರ್ಗ ಮಹಿಳೆ ಪುರನೀಯಳು, ಕರುಣಾಮಯಿ, ತ್ಯಾಗಮಯಿ, ಎಂಬೆಲ್ಲಾ ಹಣೆ ಪಟ್ಟಿ ಕಟ್ಟಿ ಸಹನೆಯೇ ಅವಳಿಗೆ ಬಂದ ಬಳುವಳಿ ಎಂಬುದನ್ನು ಇಂದಿಗೂ ಪ್ರತಿಬಿಂಬಿಸುತ್ತಾ ಬಂದಿದೆ. ಆದರ್ಶನಾರಿಯ ಪಾತ್ರದಲ್ಲಿ ಬಿಂಬಿತಗೊಂಡಿರುವ ಸೀತೆ, ಸಾವಿತ್ರಿ, ಊರ್ಮಿಳೆ ಪಾತ್ರಗಳು ಪಾತಿವ್ರತ್ಯಕ್ಕೆ ಹೆಸರುವಾಸಿ. ಎನ್ನುವ ಮಾದರಿಯನ್ನು ಮುಂದಿಟ್ಟುಕೊಂಡು ಆ ಒಂದು ಮಾರ್ಗದಲ್ಲೇ ನಡೆಯಬೇಕೆನ್ನುವ ಹಂಬಲ ಅಂದಿನಿಂದ ಇಂದಿನವರೆಗೂ ಮುಂದುವರೆದುಕೊಂಡೇ ಬಂದಿದೆ.

ಮಹಿಳೆಗೆ ಮನೆಯೇ ಅವಳ ಪ್ರಪಂಚ, ಮದುವೆಯಾದರೇ ಮುಕ್ತಿಯ ಮಾರ್ಗ ತಾಯ್ತನದಿಂದಲೇ ಅವಳ ಬದುಕು ಪರಿಪೂರ್ಣ ಎಂಬಂತಹ ಮಾತುಗಳು ಮಹಿಳೆಯನ್ನು ಎಂದೆಂದಿಗೂ ಹೊರಗೆ ಬರಲಾರದಂತಹ ಸ್ಥಿತಿಗೆ ತಂದೊಡ್ಡಿದೆ. ಇಂತಹ ಒಂದು ಪರಿಸ್ಥಿತಿ ಪ್ರಸ್ತುತದಲ್ಲಿ ಸಡಿಲಗೊಂಡು ಮಹಿಳೆಗೆ ಎಲ್ಲಾ ಸ್ವಾಂತಂತ್ರ ್ಯ ದೊರೆಯುತ್ತಿದ್ದರೂ ಸಹ, ಮಾನಸಿಕವಾಗಿ ಅವಳಿಗೆ ಇನ್ನೂ ಸ್ಥೈರ್ಯ ತುಂಬಬೇಕಾದುದು ಅಗತ್ಯ ಮತ್ತು ಅನಿವಾರ್ಯವಾದುದಾಗಿದೆ.

ಸೃಷ್ಟಿ ಕ್ರಿಯೆಯಲ್ಲಿ ಸ್ತ್ರೀ ಪುರುಷರು ಲಿಂಗ ಸಮಾನರೆಂದು ಗುರ್ತಿಸಿಕೊಂಡರೂ ಸಹ ಸ್ತ್ರೀ ಪುರುಷನಿಗಿಂತ ಕೆಳದರ್ಜೆಯವಳು, ಅವನ ಅಧೀನದಲ್ಲೇ ಬದುಕು ನಡೆಸಬೇಕೆಂಬ ಕಟ್ಟು ಪಾಡುಗಳು ಬೆಳೆದು ನಿಂತಿವೆ. ಇಂದಿನ ವಿದ್ಯಾವಂತ ಸಮುದಾಯವನ್ನು ಗಣನೆಗೆ ತೆಗೆದುಕೊಂಡರೆ ಉದಾರವಾದಿಗಳಾಗಿ ಮಾತನಾಡಿದರೂ ಸಹ, ಪುರುಷನಿಂದಲೇ ಸ್ತ್ರಿ ತನ್ನ ಅಸ್ಥಿತ್ವವನ್ನು ಕಂಡುಕೊಳ್ಳಬೇಕು ಎಂಬ ತೇಲಿಕೆಯ ಮಾತನಾಡುತ್ತಾರೆ.

ಮಹಿಳಾ ಸ್ವಾಂತಂತ್ರ್ಯವೆನ್ನುವುದು ಅಮೂರ್ತವೂ ಅಲ್ಲ. ಸನ್ನಿವೇಶಗಳಿಂದ ಅಭಾದಿತವೂ ಅಲ್ಲ. ಹಾಗೆಯೇ ಸ್ವಾಂತಂತ್ರ್ಯದ ನಿಯಂತ್ರಣ ವೈಯಕ್ತಿಕವಾದದ್ದಾಗಲೀ ಸನ್ನಿವೇಶದ ನಿಯಂತ್ರಣವಾಗಲೀ ಆಗಬಹುದು. ಆದ್ದರಿಂದ ಹೆಣ್ಣು ತನ್ನ ಸ್ವಾಂತಂತ್ರ್ಯ ವನ್ನು ಪಡೆಯಬೇಕಾದರೆ ಅದರ ಬಗೆಗಿನ ತಿಳುವಳಿಕೆಯನ್ನು ಪಡೆಯಲು ಪ್ರಯತ್ನ ನಡೆಸಬೇಕು. ಅನುಭವ ಜನ್ಯವಾದ ತಿಳುವಳಿಕೆಯನ್ನು ಹೆಣ್ಣು ದೂರ ಮಾಡಿದಷ್ಟು ಅವಳದಾಸ್ಯದ ಸಂಕೋಲೆಯನ್ನು ತನಗೆ ಸುತ್ತಿಕೊಳ್ಳುತ್ತಿರುತ್ತಾಳೆ. ಎಂಬ ಮಾತುಗಳು ಸತ್ಯವಾದರೂ ಸಹ ಇದಿಲ್ಲದರಿಂದ ಮುಕ್ತವಾದಾಗ ರ ಮಾತ್ರ ತನ್ನ ನೆಲೆಯನ್ನು ಕಂಡುಕೊಳ್ಳಲು ಸಾಧ್ಯ.

ಜವಹಲ್‌ಲಾಲ್ ನೆಹರೂರವರ ಮಾತುಗಳು ಇದಕ್ಕೆ ಸ್ಪಂದಿಸುವ ರೀತಿಯಲ್ಲಿ ಅರ್ಥ ಪೂರ್ಣ ಎನ್ನಬಹುದು.

" ಮಹಿಳೆಗೆ ಸ್ವಾಂತಂತ್ರ್ಯ ದೊರೆಯಬೇಕಾದರೆ ವಿವಾಹ ಒಂದು ವೃತ್ತಿ ಎಂಬ ಭಾವನೆ ಮೊದಲು ಮರೆಯಬೇಕು. ಸ್ವಾಂತಂತ್ರ್ಯವು ಆರ್ಥಿಕ ಸ್ಥಿತಿಗತಿಗಳ ಮೇಲೆ ಅವಲಂಬಿಸಿದೆ. ಮಹಿಳೆ ಆರ್ಥಿಕವಾಗಿ ಸ್ವಾಂತತ್ರ್ಯಳಾಗದೆ ಹಾಗೂ ಸ್ವಯಂಗಳಿಕೆಯಲ್ಲಿ ತೊಡಗದಿದ್ದರೆ ಅವಳು ಗಂಡ ಅಥವ ಇನ್ನಾರ ಮೇಲೋ ಅವಳಂಬಿತಳಾಗಿರಬೇಕಾಗುತ್ತದೆ. ಪರಾವಲಂಬಿಗಳೆಂದಿಗೂ ಸ್ವಂತಂತ್ರರಲ್ಲ. ಸ್ತ್ರೀಪುರುಷರ ಸಂಬಂಧ ಪರಸ್ಪರ ಅವಲಂಭಿಸಿ ಇಲ್ಲದಂತಹ ಸ್ವಂತ್ರ ಸಂಗಾತಿತನ ಕೊಡುವಂತದ್ದು. ಸಮಾಜದ ಕೇಂದ್ರ ಬಿಂದು ಎಂದು ಪರಿಗಣಿಸಲ್ಪಡುವ ಹೆಣ್ಣಿನ ಹಿಂದಿನ ಮತ್ತು ಇಂದಿನ ದುಸ್ಥಿತಿಗೆ ಕಾರಣವೇನು? ಎಂಬ ಅಂಶ ಚಾರಿತ್ರಿಕವಾಗಿ ಉಳಿಯುವಂತಹದ್ದು. ಎಂಬ ಹೇಳಿಕೆ ಮಹಿಳೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಇಂದು ಹೋರಾಡಲೇ ಬೇಕಾದ ಪರಿಸ್ಥಿತಿಯನ್ನು ಮನಗಾಣಿಸುತ್ತದೆ.

ಗಾಂಧಿ ಮಹಿಳೆಯರ ಬಗ್ಗೆ ತಳೆದಂತಹ ನಿಲುವುಗಳು ಮಹಿಳೆಯ ಸ್ವಾವಲಂಬನೆ ಎಂಬುದು ಆರೋಗ್ಯಕರ ಸಮಾಜಕ್ಕೆ ಅಗತ್ಯವಾದುದು ಎಂಬುದನ್ನು ತಿಳಿಸುತ್ತದೆ.

ನಾನು ಹೆಂಗಸಾಗಿ ಹುಟ್ಟಿದರೆ ಹೆಣ್ಣನ್ನು ಆಟಿಕೆ ಎಂದುತಿಳಿಯುವ ಗಂಡಸಿನ ಎಲ್ಲಾವರ್ತನೆಗಳ ವಿರುದ್ಧವೂ ಸಿಡಿದೇಳುತ್ತಿದ್ದೆ. ಮದುವೆ ಮಾಡಿಕೊಳ್ಳಲು ವರದಕ್ಷಿಣೆಯನ್ನು ಆಗ್ರಹ ಪಡಿಸುವ ಯಾವನೇ ಯುವಕನು ತನ್ನ ವಿದ್ಯಾಭ್ಯಾಸವನ್ನು ದೇಶವನ್ನು ಒಟ್ಟಾರೆಯಾಗಿ ಸ್ತ್ರೀತ್ವವನ್ನೇ ಅಪಮಾನಗೊಳಿಸಿದಂತೆ .

"ಪ್ರತಿಯೊಬ್ಬ ಭಾರತೀಯ ಹೆಣ್ಣು ಮದುವೇಯಾಗಲೆಂದೇ ಹುಟ್ಟಿದವಳಲ್ಲ. ಒಬ್ಬನ ಸೇವೆ ಮಾಡುವ ಬದಲು ಇಡೀ ಸಮಾಜದ ಸೇವೆಗಾಗಿ ತಮ್ಮನ್ನು ಮುಡುಪಾಗಿಟ್ಟು ಅನೇಕ ಹುಡುಗಿಯರನ್ನು ನಾನು ನಿಮಗೆ ತೋರಿಸಬಲ್ಲೆ "2 ಎಂಬ ಗಾಂದೀಯ ಮಾತುಗಳು ಬದುಕಿನಲ್ಲಿಹೆಣ್ಣಿಗೆ ಯಾವುದು ಆದರ್ಶವಾಗಬೇಕು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಭ್ರೂಣ ಹತ್ಯೆ ಹೆಚ್ಚುತ್ತಿರುವ ಇಂತಹ ಕಾಲದಲ್ಲಿ ಹೆಣ್ಣು ಮಗುವನ್ನು ಪ್ರಪಂಚ ನೋಡುವ ಮೊದಲೇ ಇಲ್ಲವಾಗಿರುವ ಪ್ರಕ್ರಿಯೆ ತೀರಾ ಸಾಮಾನ್ಯವಾಗಿರುವುದನ್ನು ಕಾಣಬಹುದು. ಹೆಣ್ಣಿನ ಬಗ್ಗೆ ಸಮಾಜ ತಾಳಿರುವ ಪಕ್ಷಪಾತ ಧೋರಣೆ ಅವಳನ್ನು ಕುಟುಂಬದ ಹೊರೆಯಾಗಿ, ಶಾಪವಾಗಿ ಪರಿಗಣಿಸುವ ಸ್ಥಿತಿ. ಗಂಡು ಮಗುವಿಗಿರುವ ಅತಿಶಯವಾದ ಪ್ರಾಶಸ್ತ್ಯ ಹೆತ್ತರವನ್ನು ಸ್ವರ್ಗಕ್ಕೆ ಕಳುಹಿಸುವ ಏಕೈಕ ಸಾಧನ ಗಂಡು ಮಗ .

ಸೀತೆ ಅಗ್ನಿ ಪ್ರವೇಶ ಮಾಡಿದ ಸಂಸ್ಕೃತಿಯನ್ನು ಆದರ್ಶವಾಗಿಸಿರುವ ನಮ್ಮ ಸಮಾಜ ಅದೇ ಮಾದರಿಯಲ್ಲಿ ಹೆಣ್ಣನ್ನು ಕೇವಲ ಹಣಕ್ಕಾಗಿ, ಸಂತಾನಕ್ಕಾಗಿ, ಸೀಮೇಎಣ್ಣೆ ಹಾಕಿ ದಹಿಸುವ ಕ್ರಮ ಯಾವಆದರ್ಶ ಪಾಲನೆಗಾಗಿ?ಎಂಬ ಪ್ರಶ್ನೆ ಉದ್ಭವಿಸುತ್ತದೆ. ಊರ್ಮಿಳೆ ತನ್ನ ಗಂಡನ ಬರುವಿಕೆಗಾಗಿ ಕಾಯ್ದು ಅರಮನೆಯಲ್ಲಿ 14 ವರ್ಷ ತಪಸ್ಸನ್ನು ಆಚರಿಸಿ ಆದರ್ಶನಾರಿ ಎನಿಸಿಕೊಂಡಳು ಎಂಬ ಮಾತು ಇಂದಿಗೂ ಹೊರತಾಗಿಲ್ಲ. ವರದಕ್ಷಿಣೆ ಕೊಡಲಾಗದೆ ಗಂಡನಿಂದ ದೂರ ಉಳಿದು ಬದುಕುತ್ತಿರುವ ನಮ್ಮ ಆಧುನಿಕ ಹೆಣ್ಣುಮಗಳು ಬದುಕು ನಡೆಸುವ ಕ್ರಮ ನೋಡಿದರೆ ಅವಳನ್ನು ಆಧುನಿಕ ಊರ್ಮಿಳೆ ಎಂದರೆ ಈ ಸಮಾಜ ಒಪ್ಪುತ್ತದೆಯೇ? ಪುರುಷ ಸಮಾಜಕ್ಕೆ ಹೆಣ್ಣಿನ ಆದರ್ಶತನ ಕೇವಲ ಚರಿತ್ರೆಯಲ್ಲಿ ತೂಗುಯ್ಯಾಲೆಯಂತೆ ಆಡುವ ಪಾತ್ರಗಳಿಗೆ ಸೀಮಿತವಾಗಬೇಕು ಅಷ್ಟೆ.

ಈ ಎಲ್ಲಾಸಮಸ್ಯೆಗಳಿಂದ ದೂರ ಉಳಿದು ತನಗೆ ಬೇಕಾದಂತಹ ಬದುಕು ನಡೆಸಲು ಬಯಸುವ ಹೆಣ್ಣಿಗೆ ಈ ಸಮಾಜ ಯಾವ ರೀತಿಯ ಪ್ರಾಶಸ್ತ್ಯ ಕೊಡುತ್ತದೆ ಎಂಬುದನ್ನು ನಮ್ಮ ನಿಮ್ಮೆಲ್ಲರಿಗೂ ಗೊತ್ತಿರುವಂತದ್ದೇ.

'ಹೆಂಡತಿಯಾದವಳು ಸಂಗಾತಿ, ಮಗಳಾದರೋ ಸಂಕಷ್ಟಗಳನ್ನು ತರುವವಳು ಮಗನು ಮೋಕ್ಷವನ್ನು ತೋರಿಸುವ ದಾರಿದೀಪ!

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ, ಬಾಡಿಗೆ ಎತ್ತು ದುಡಿದ್ಹಂಗ, ಬಾಳೆಲೆಯ ಹಾಸುಂಡು ಬೀಸಿ ಎಸೆದ್ಹಾಂಗ'' 3 ಎಂಬ ಮಾತುಗಳು ತಾಯ್ತನವನ್ನು ಪರಮ ಆದರ್ಶವಾಗಿವೆ.

ಸ್ತ್ರೀಯರು ಚಂಚಲ ಚಿತ್ತರು. ತೋಳದ ಹೃದಯ ಉಳ್ಳವರು , ಮೋಸಗಾರ್ತಿಯರು, ನಂಬಲು ಅನರ್ಹರು ಎಂಬೆಲ್ಲಾ ವಿಶ್ಲೇಷಣೆಗಳೊಂದಿಗೆ ಹಣ್ಣನ್ನುಕಲ್ಪಿಸಿಕೊಳ್ಳುವ ಪುರುಷ ಸಮಾಜ ಹೆಣ್ಣಿನ ಹುಟ್ಟಿನ ಬಗೆಗೆ ತೋರುವ ನಿರ್ಲಕ್ಷ್ಯಕ್ಕೆ ಕಾರಣ ಸಮಾಜದಲ್ಲಿ ಹೆಣ್ಣಿಗಿರುವ ಸ್ಥಾನಮಾನವೇ ಆಗಿದೆ. ಮಗುವಿನೊಂದಿಗೆ ಹೆಣ್ಣಿನ ಭವಿಷ್ಯವನ್ನು ಬೆಸೆದು ಬಿಟ್ಟಿರುವ ನಮ್ಮ ಸಂಸ್ಕೃತಿಯಲ್ಲಿಹೆಣ್ಣಿನ ಮದುವೆಯಾಗುವುದು ಕಷ್ಟವೆಂದೊಡನೆ ಹೆತ್ತರವರಿಗೆ ಭವಿಷ್ಯ ಅಂಧಕಾರವಾಗಿ ಕಾಣುತ್ತದೆ.

ಇದರೊಂದಿಗೆ ಹೆಣ್ಣು ಜೀವನದುದ್ದಕ್ಕೂ ಎದುರಿಸಬೇಕಾದ ಕಷ್ಟ ನಷ್ಟಗಳು , ಕಷ್ಟ ನಷ್ಟಗಳು ,ಆರ್ಥಿಕ ಸ್ವಾವಲಂಬನೆ ಮುಂತಾದವು ಹೆಣ್ಣನ್ನು ಒಂದು ಹೊರೆಯಾಗಿ ,ಶಾಪವಾಗಿ ಪರಿಗಣಿಸುವಂತೆ ಮಾಡಿವೆ.

ಇಂದಿನ ಜಾಗತೀಕರಣ ಯುಗದಲ್ಲಿ ಮಹಿಳೆ ವಿದ್ಯಾವಂತಳಾಗಿ ತನ್ನ ನೈತ್ತಿಕ ಜ್ಞಾನ ಮಟ್ಟವನ್ನು ಹೆಚ್ಚಿಸಿಕೊಂಡರೂ ಸಹ, ಸ್ವಾಂತಂತ್ಯದಲ್ಲೇ ಬಂಧನದ ಬೆಸೆಯುವಿಕೆ ಅವಳ ಎಲ್ಲಾರೀತಿಯ ಜ್ಞಾನವನ್ನು ಕೂಡಿ ಹಾಕುತ್ತಿದೆ. ಅಂತರಿಕ್ಷದಲ್ಲಿ ಹಾರಾಟ ನಡೆಸಿ ಪುರುಷನೊಂದಿಗೆ ಸರಿ ಸಮಾನಕ್ಕಿಳಿದು ಗುರ್ತಿಸಿಕೊಂಡರೂ ಪುರುಷ ಮತ್ತು ಸ್ತ್ರೀಯರು ಸಮಾನರು ಎಂಬ ಮಾತುಗಳನ್ನು ಒಪ್ಪಿಕೊಳ್ಳುವಲ್ಲಿ ನಮ್ಮ ಸಮಾಜ ಹಿಂದೆ ಸರಿಯುತ್ತಿದೆ. ಸ್ತ್ರಿ ಎಂದಿಗೂ ಎಲೆ ಮರೆ ಕಾಯಿಯ ಹಾಗೆ ಅವಳ ಸಾದನೆ ತ್ಯಾಗ ಎಂಬುದರಲ್ಲಿ ಅರ್ಥ ನಿಗೂಢತೆ ಹೊಂದಿ ಸಂಕುಚಿತವಾಗುತ್ತಿದೆ. ಏನೇ ಜಿಜ್ಞಾಸೆಗಳಿದ್ದರೂ ಸಹ ಮಹಿಳೆಗೆ ತನ್ನನ್ನು ತಾನುಗುರುತಿಸಿಕೊಳ್ಳಬೇಕು! ಎಂಬ ಆತ್ಮ ವಿಶ್ವಾಸವಿದ್ದಾಗ ಮಾತ್ರ ಅವಳ ಎಲ್ಲಾ ಸಾಧನೆಗಳೂ ಫಲಿಸುತ್ತವೆನ್ನಬಹುದು.

## ಸ್ತ್ರೀವಾದ

ಅಮೇರಿಕಾ ಮತ್ತು ಫ್ರಾನ್ಸ್ ದೇಶಗಳಲ್ಲಿ ಬೆಳೆದು ಬಂದಂತಹ ಸ್ತ್ರೀ ಸ್ವಾತಂತ್ರ್ಯದ ಚಳುವಳಿಯ ಒಂದು ಭಾಗವೇ ಸ್ತ್ರೀವಾದ. ಸ್ತ್ರೀವಾದಕ್ಕೆಒಂದು ತಾತ್ವಿಕ ನಲೆಗಳನ್ನು ಕಟ್ಟಿಕೊಡುವುದು ಕಷ್ಟ . ಸ್ತ್ರೀವಾದಿ ಎಂದರೆ ಕೇವಲ ಸ್ತ್ರೀ ಮಂತ್ರವಲ್ಲ . ಪುರುಷನೂ ಸಹ ಸ್ತ್ರೀ ವಾದದ ಮುಖ್ಯ ಅಂಶ. ಸ್ತ್ರೀತ್ವವನ್ನುವುದು ಯಾವ ಒಂದು ಸಿದ್ಧಾಂತಕ್ಕೂ ಕಟ್ಟು ಬೀಳದ ವಿವಿಧ ಕ್ಷೇತ್ರಗಳಲ್ಲಿ ಸರಾಗವಾಗಿ ಹರಿಯುವ ಪ್ರಜ್ಞೆ ಸ್ತ್ರೀ ವಾದವೆನ್ನಬಹುದು.

'ಸಮಾಜದಲ್ಲಿ ಲಿಂಗಧಾರಿತ ಸಮಸ್ಯೆಗಳ ಅರಿವನ್ನು ಮೂಡಿಸಿಕೊಂಡು ಸಮಾಜದ ವಿವಿಧ ಸಂಸ್ಥೆಗಳಲ್ಲಿ ಸ್ತ್ರೀಯರ ಶೋಷಣೆ,ಶಿಕ್ಷಣ, ಉದ್ಯೋಗ , ಆಸ್ತಿಯ ಹಕ್ಕುವಿವಾಹ ವಿಚ್ಛೇದನ, ಸಂತಾನ ನಿಯಂತ್ರಣ ಮುಂತಾದ ಕ್ಷೇತ್ರಗಳಲ್ಲಿ ಪ್ರತಿಭಟನೆಗಳಿದ್ದರೂ ಇವುಗಳಲ್ಲಿ ಬಹುತೇಕವಾಗಿ ತಾತ್ವಿಕ ಒಪ್ಪಿಗೆ ದೊರೆಯುತ್ತಿದೆಯೇ ವಿನಃ ಆಚರಣೆಯ ರೂಪದಲ್ಲಲ್ಲ. ಸಮಾಜದ ವಿವಿಧ ಪದರಗಳಲ್ಲಿ ಹಾಸು ಹೊಕ್ಕಾಗಿರುವ ಲಿಂಗಾಧಾರಿತ ಅಸಮಾನತೆಯನ್ನು ಪ್ರಶ್ನಿಸಿ , ಪ್ರತಿಭಟಿಸಿ, ಕಿತ್ತೊಗೆದಾಗ ಮಾತ್ರ ಸ್ತ್ರೀ ಸಮಾನತೆಯ ಹೋರಾಟಕ್ಕೆ ಒಂದು ಅರ್ಥಪೂರ್ಣತೆ ಬರುವುದು ಎಂಬುದು ಸಮಕಾಲೀನ ಸ್ತ್ರೀ ವಾದದ ಧ್ಯೇಯವಾಗಿದೆ.

ಸ್ತ್ರೀವಾದವನ್ನು ಕುರಿತು ಇನ್ನೊಂದು ವಿವರಣೆ ಈ ರೀತಿ ಇದೆ. " ಮಹಿಳೆಯರು ಪುರುಷರಿಗೆ ಹೇಳುವ ಬುದ್ದಿವಾದ ಅಥವಾ ನಿಟ್ಟಿನ ಪ್ರತಿರೋಧವೇನಲ್ಲ. ಬದಲಿಗೆ ಇದು ಸಮಾಜದಲ್ಲಿ

ರೂಪುಗೊಂಡಿರುವ ಅನಾರೋಗ್ಯಕರ ಸ್ತ್ರೀ ವಿರೋಧಿ ಮನೋಭಾವ ಹಾಗೂ ನಿಯಮಾವಳಿಗಳನ್ನು ಸ್ತ್ರೀ ಪುರುಷರಿಬ್ಬರಿಗೂ ಅರ್ಥವಾಗುವಂತೆ ವಿಶ್ಲೇಷಿಸಿ ಸಮಾನತೆಯ ತತ್ವಕ್ಕೆ ಹೊಂದಿಸಿ ಪುನಾರೂಪಿಸುವ ಸಾಮಾಜಿಕ ಚಿಂತನೆ. ಈ ಮೂಲಕ ಸ್ತ್ರೀ ಪುರುಷ ಸಂಬಂಧಗಳಲ್ಲಿ ಕರಾಳವಾಗಿ ವ್ಯಾಪಿಸಿರುವ ವೈಶಮ್ಯವನ್ನು ಇಲ್ಲವಾಗಿಸುವ ಒಂದು ಸ್ನೇಹ ಪೂರ್ಣ ಪ್ರಯತ್ನ. ಇಷ್ಟಾದರೂ ಸಹ ಇಂದಿನ ಸಾಹಿತ್ಯ ವಲಯದಲ್ಲಿ ಮತ್ತು ಜಾಗತೀಕರಣ ಯುಗದಲ್ಲೂ ಸ್ತ್ರೀ ವಾದಗಳೆಂದರೆ ಸಂಕುಚಿತವಾಗಿ, ಪ್ರಶ್ನಾರ್ಥಕವಾಗಿನೋಡುವ ಮನೋಭಾವನೆ ಕಂಡು ಬರುತ್ತಿದೆ. ಆದರೆ ಶೋಷಿತ ವರ್ಗದ ವಿರುದ್ಧ ಪ್ರಜ್ಞಾವಂತ ಸಮಾಜ ನಿರಂತರವಾಗಿ ಹೋರಾಡುವುದು ಅನಿವಾರ್ಯ. ಸಮಾಜ ಎಂದಕೂಡಲೆ ಸ್ತ್ರೀ ಮತ್ತು ಪುರಷವರ್ಗ ಒಟ್ಟಾರೆ ಗ್ರಹಿಕೆಯ ನೆಲೆಗಳಾಗಿ ಕಂಡುಬರುತ್ತವೆ. ಸಮಾಜದ ಕುಂದು , ಕೊರತೆ, ಜಾತಿ- ಜನಾಂಗ ಮುಂತಾದ ಸಮುದಾಯಕ ಹೋರಾಟಗಳಲ್ಲಿ ಈ ಎರಡೂ ವರ್ಗಗಳು ಕೂಲಂಕುಷವಾಗಿ ಗಣನೆಗೆ ತೆಗೆದುಕೊಂಡು ಚರ್ಚಿಸುತ್ತವೆ. ಆದರೆ ಸ್ತ್ರೀ ವಾದ ಅಥವಾ ಸ್ತ್ರೀ ಸಂವೇದನೆ ಎಂಬ ಮಾತುಗಳು ಕೇಳಿಬರುತ್ತಿರುವ ಸಂದರ್ಭದಲ್ಲಿ ಒಂದು ಪ್ರತ್ಯೇಕತೆ ಎಂಬುದು ತನಗೆ ತಾನೇ ಕಂಡು ಬರುವುದು ಆಶ್ಚರ್ಯ ಮತ್ತು ವಿಪರ್ಯಾಸದ ಸಂಗತಿ ಇಂಥ ಒಂದು ಬಿಡಿಸಲಾಗದ ಕಗ್ಗಂಟನ್ನು ಆದಾವ ಭದ್ರ ಬುನಾದಿಯ ಮೇಲೆ ಈ ಸಮಾಜ ಒಂದು ಸಮಾಜ ನಿರ್ಮಿಸಿದೆ . ಎಂಬ ಮಾತು ಇಂದಿಗೂ ಪಾರಂಪರಿಕವಾಗಿ ಮುಂದುವರೆಸಿಕೊಂಡು ಬಂದ ನಮ್ಮ ಸಾಮಾಜಿಕ ಸ್ಥರವನ್ನು ಇಂದು ಎಲ್ಲರೂ ಶೋಧಿಸಬೇಕಾದುದು ಅಗತ್ಯ ಮತ್ತು ಅನಿವಾರ್ಯ.

ಕಳೆದೆರಡು ದಶಕಗಳಲ್ಲಿ ಕನ್ನಡದಲ್ಲಿ ಸಾಕಷ್ಟು ಸ್ತ್ರೀವಾದಿ ಚಿಂತನೆಗಳು ಬೆಳೆದು ಬಂದಿವೆ. ತೇಜಸ್ವಿನಿ ನಿರಂಜನ, ವಿಜಯಾದಬ್ಬೆ, ಬಿ.ಎನ್. ಸುಮಿತ್ರಾಬಾಯಿ, ನೇಮಿಚಂದ್ರ ,ಎನ್. ಗಾಯಿತ್ರಿ ಬಿ.ಎಂ. ರೋಹಿಣಿ ಮುಂತಾದ ಚಿಂತಕಿಯರಿಂದ ಸಾಹಿತ್ಯದ ಮುಖಾಂತರ ಇಂದು ಹೆಣ್ಣಿನ ಅಸ್ಥಿತ್ವದ ಬಗೆ, ವಾಸ್ತವದೊಂದಿಗೆ ಬದುಕು ನಡೆಸುವ ಕ್ರಮ, ಹೆಣ್ಣನ್ನು ಯಾವ ರೀತಿ ನೋಡಬಹುದು ಎಂಬುದನ್ನು ಎಲ್ಲರೂ ತಿಳಿಯುವಂತೆ ಮೂಡಿವೆ.

ಬದುಕಬೇಕು ನಮಗಾಗಿ , ನನಗಾಗಿ, ನಾನಾಗಿ ಎಂಬ ಮಾತುಗಳು ಪುರುಷನ ಅಧೀನತೆಯಿಂದ ಹೊರಬಂದು ಸಮಾನತೆಯ ಹಾದಿಯಲ್ಲಿ ಜೊತೆಯಾಗಿ ನಡೆಯುವಂತೆ ಮಾಡಿರವುದು ಸ್ತ್ರೀವಾದ ಹುಟ್ಟಿಕೊಂಡ ಬಗೆಯಿಂದಲೇ ಎನ್ನಬಹುದು. ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದಿ ವಿಮರ್ಶೆ ಇದೀಗ ಚಿಗುರೊಡೆಯುತ್ತಿದೆ. ಬಂಡಾಯ ದಲಿತ ಸಾಹಿತ್ಯದೊಂದಿಗೆ ಈ ದನಿ ಪ್ರಾರಂಭವಾದರೂ ,ಈ ಒಂದು ದಶಕದಲ್ಲಿ ಇದು ಸಾಮೂಹಿಕ ಸ್ವರೂಪವನ್ನು ಪಡೆಯುತ್ತಾ ಗಟ್ಟಿ ದನಿಯಾಗತ್ತಿದೆ. ಸ್ತ್ರೀಯರ ಬದುಕಿನ ಸ್ವರೂಪವೇನು? ಸ್ವಭಾವವೇನು? ಗುರಿಯೇನು? ಎಂಬ ಪ್ರಶ್ನೆಗಳು ಸಾಹಿತ್ಯದ ಮುಖಾಂತರ ಎಲ್ಲರನ್ನೂ ಕಾಡುವಂತೆ ಮಾಡಿದೆ. ಚರಿತ್ರೆಯ ಪುಸ್ತಕದಲ್ಲಿ ಕೇವಲ ಸೌಂದರ್ಯಕ್ಕೆ, ತಾಯ್ತನಕ್ಕೆ ,ಭೋಗಕ್ಕೆ ಸಂಸಾರಕ್ಕೆ ಸೀಮಿತಳಾದ ಹೆಣ್ಣಿನ ಅಸ್ತಿತ್ವವನ್ನು ಸಮರ್ಥಿಸಲು ಇಂದು ಸಾಹಿತ್ಯದ ಮಾದ್ಯಮ ಹತ್ತಿರವಾಗಿದೆ.

ಸ್ತ್ರೀಯು ಆದಿಶಕ್ತಿ ಎಂಬ ಕಲ್ಪನೆ ಭಾರತದ್ದು. ಪುರುಷತತ್ವ , ನಿಷ್ಕ್ರಿಯ , ದುರ್ಬಲ, ದೂರದ್ದು ಮತ್ತು ಅಪ್ರಧಾನ . ಜೀವನದ ಮೊದಲಾದವುಗಳ ಅಧಿದೇವತೆ. ಸ್ತ್ರೀ ಭಾರತೀಯ ಮನಸ್ಸಿನ ಅಂತಿಮ ಅಧಿಕಾರಯುಕ್ತ ದನಿ ಯಾವಾಗಲೂ ಸ್ತ್ರೀಯಾತ್ಮಕವಾದ್ದೆ ಆಗಿದೆ. ಎಂಬ ಗ್ರಹಿಕೆಗಳಲ್ಲಿ ಸತ್ಯವಿದ್ದರೂ ಸಂದರ್ಭದ ಸಮಗ್ರತೆಯನ್ನು ಈ ಗ್ರಹಿಕೆಗಳು ಪ್ರತಿ ಬಿಂಬಿಸುವಲ್ಲಿ ಎಡವುತ್ತವೆ. ಹೆಣ್ಣನ್ನು ಭೂಮಿಗೆ ಹೋಲಿಸಿರುವ ಸಮಾಜ ಪುರುಷರಿಗೆ ಅಧೀನವಾಗೇ ಸ್ತ್ರೀಯನ್ನು ನೋಡಬೇಕೆಂದು ಬಯಸುತ್ತದೆ. ಮಹಿಳೆ ಕೇವಲ ಮನೆಗೆ ಮಾತ್ರ ಸೀಮಿತವಲ್ಲ. ಹೊರಗಿನ ಪ್ರಪಂಚದಲ್ಲೂ ಅವಳ ಅಸ್ತಿತ್ವವನ್ನು ತೋರಬಹುದು, ಎಂದು ಹಲವರ ವಾದವಿದ್ದರೂ ಮೊದಲಿನಿಂದಲೂ ಹೆಣ್ಣು ಕೇವಲ ಮೃದುತ್ವಕ್ಕೇ ಮೀಸಲು ಎಂಬ ಆಳವಾದ ನಂಬಿಕೆ ಬೇರೂರಿದೆ. ಭಾರತದ ಸಂದರ್ಭದಲ್ಲಿ ಇದು ಅತಿ ಹೆಚ್ಚಾಗಿರುವುದನ್ನು ನೋಡಬಹುದು.

'ಸಿಮನ್ ದ ಬೂವಾ' ಹೇಳುವಂತೆ.

ಹೆಣ್ಣು ಹೆಣ್ಣಾಗಿ ಹುಟ್ಟುವುದಿಲ್ಲ. ಹೆಣ್ಣಾಗಿ ಮಾರ್ಪಾಡುತ್ತಾಳೆ. ಜೈವಿಕ ಸಾಕ್ಷ್ಯವು ಸ್ತ್ರೀಯನ್ನು ಪುರುಷನಿಗಿಂತ ಭಿನ್ನಳೆಂದು ಸ್ಥಾಪಿಸುತ್ತದೆಯೇ ಹೊರೆತು ಅವನಿಗಿಂತ ಕೀಳು ಎಂದಲ್ಲ. ಲಿಂಗ ಬೇದವೆಂದರೆ ಒಂದು ಶ್ರೇಣಿಕೃತ ಮೌಲ್ಯವಲ್ಲ . ಹುಟ್ಟಿನಿಂದಲೇ ಹೆಣ್ಣಿನ ಬೆಳವಣಿಗೆಯ ಕ್ರಮ ಬದ್ಧ ಶಿಕ್ಷಣ. ಸಮಾಜ ಯಾವ ರೀತಿ ರೂಪಿಸಿದೆ ಎಂಬುದನ್ನು ತಿಳಿಯಬೇಕಾದುದು ಮುಖ್ಯ ಎಂದಿದ್ದಾಳೆ.

'ಬಿನ್ ಮರೀನ್ ' ತನ್ನ
ಪುಸ್ತಕದಲ್ಲಿ ಹೇಳುವಂತೆ

'ಸಂರಚನೆಯೊಳಗೆ ಸೇರಿದ ಸಾಂಸ್ಥಿಕ ರೂಪಪಡೆದ ಪುರುಷ ಕೇಂದ್ರಿತ ಚಿಂತನೆ , ತುಳಿತಕ್ಕೆ ನಾವು ಸವಾಲೆಸೆಯದೆ ಬಿಟ್ಟಾಗಲೆಲ್ಲಾ ತುಳಿತದ ಪ್ರಕ್ರಿಯೆಯಲ್ಲಿ ನಾವು ಭಾಗಿಗಳಾಗುತ್ತಿದ್ದೇವೆ. ಪುರುಷ ಕೇಂದ್ರಿತ ವಾಸವು ಜನಾಂಗವಾದ ಜಾತಿವಾದ, ವರ್ಗವಾದಗಳಿಂದ ಸೂಕ್ಷ್ಮವಾಗಿ ಕೆಲಸ ಮಾಡುವುದರಿಂದ ಹಾಗೂ ವಂಚಿತರು, ವಂಚಕರ ಸ್ಪಷ್ಟ ವಿಭಾಗ, ಗುಂಪು ಗೆಸ್ಟೋಸ್ ಸಾಧ್ಯವಾಗದಿರುವುದರಿಂದ ಸ್ತ್ರೀವಾದ ಪ್ರಜ್ಞೆಯ ಜಾಗೃತಿ ಮತ್ತು ಹೋರಾಟಕ್ಕೆ ಬೇಕಾದ ತಿಳುವಳಿಕೆ ಮತ್ತು ಕಾರ್ಯ ವಿಧಾನವು ಕೂಡ ಬೇರೆ ಬಗೆಯದಾಗಿರುವುದು ಅನಿವಾರ್ಯವಾಗುತ್ತದೆ''. ಎಂದು ಹೇಳಿದ್ದಾರೆ.

ಸ್ತ್ರೀ ವಾದಿ ಪ್ರಜ್ಞೆಯ ಅರಳುವಿಕೆ, ಪುರುಷ ಕೇಂದ್ರಿತ ಮಿತಿ ಮತ್ತು ಅಪಾಯಗಳನ್ನು ತೆರೆದು ತೋರಿಸುತ್ತದೆ. ಸ್ತ್ರೀವಾದಿ ಪ್ರಜ್ಞೆಯ ಮತ್ತೊಂದು ಮುಖ್ಯ ಕಾಳಜಿ ಎಂದರೆ ಲಿಂಗ ಜಾತಿಗಳ ಮೇಲಿನ ನಿಗದಿತ ಪಾತ್ರಗಳ ಹೇರಿಕೆಯನ್ನು ಕುರಿತ ವಿರೋಧ, ಅವಳು ಹುಡುಗಿಯಾದರೆ ಮನೆಯೊಳಗೆ ಆಡಲು ಗೊಂಬೆ , ಹುಡುಗನಾದರೆ ಸಮಾಜದೊಂದಿಗೆ ಹೊಂದಿಕೊಳ್ಳುವ ಗುಣಗಳನ್ನು ಕಲಿಸಿಕೊಡುವ ಒಂದು ಹಂತ ಮೊದಲೇ ಸೃಷ್ಟಿಯಾಗಿತ್ತು.

'ಸ್ತ್ರೀ ವಿಮೋಚನೆಯಲ್ಲಿ ಮನುಷ್ಯನ ವಿಮೋಚನೆಯಿಂದೆ'. ಎಂಬ ಬುವಾಳ ಮಾತು ಇಂದು ಎಲ್ಲರನ್ನೂ ತಲುಪಬೇಕಾದುದು ಬಹಳ ಮುಖ್ಯ. ಗಂಡು ಹೆಣ್ಣಿನ ಲೈಂಗಿಕ ಸಂದರ್ಭದಲ್ಲಿ ಗಂಡಿನ ಪಾತ್ರವನ್ನು ಮೇಲ್ವರ್ಗದೆಂದೂ, ಶಕ್ತಿಯುತವಾದ್ದದೆಂದೂ , ಪಿತೃ ಸಂಸ್ಕೃತಿಯ ಮುಖಮಣಿಯಾದ ಸಾಹಿತ್ಯ ನಂಬುತ್ತದೆ. ಅಂತಹ ಸಾಹಿತ್ಯವು ಗಂಡಸಿನ ಭೋಗದ ವಸ್ತುವಾಗಿ ಮಾತ್ರಹೆಣ್ಣಿನ ಜೀವನವನ್ನು ಮಿತಿಗೊಳಿಸುತ್ತಾ ಸ್ತ್ರೀಯನ್ನು ಅವಮಾನಸಿದೆ. ಅವಳ ವೈಯಕ್ತಿಕವಾದ, ಸಮಗ್ರ ವಾದ ಜೀವನ ಅದಕ್ಕೆ ಮುಖ್ಯವಾಗುವುದಿಲ್ಲ. ಅವಳ ಇಡಿಯಾದ ವ್ಯಕ್ತಿತ್ವವನ್ನು ಲೈಂಗಿಕತೆ ಮತ್ತು ಸಂತಾನೋತ್ಪತ್ತಿಗೆ ಇಳಿಸಲಾಗಿದೆ. ಪ್ರಾಚೀನ ಕನ್ನಡ ಸಾಹಿತ್ಯ ಬಹುಪಾಲು ಈ ಸೆಕ್ಸಿಸ್ಟ್ ಧೋರಣೆಯನ್ನು ಬಿಂಬಿಸುತ್ತದೆ. ನಮ್ಮ ಹಲವು ಧಾರ್ಮಿಕ ಕಾವ್ಯಗಳು ಹೆಂಗಸನ್ನು ಆದಷ್ಟು ದೂರವಿರಿಸುವ ಆದರ್ಶವನ್ನು ಹೇಳುತ್ತಾ ಅವಳ ದೇಹದ ಸುತ್ತ ಗಿರಕಿ ಹೊಡೆದಿವೆ. ಶೃಂಗಾರ ಪ್ರಧಾನವಾದ ಕಾವ್ಯ ಪರಂಪರೆಯಲ್ಲಿ ಹೆಂಗಸು ಏನಾಗಿದ್ದಾಳೆಂಬುದನ್ನು ಸ್ತ್ರೀ ವಾದಿಗಳು ಎಚ್ಚರದಿಂದ ನೋಡಿದಾಗಲೇ ಸಾಹಿತ್ಯ ಪರಂಪರೆಯ ದೃಷ್ಟಿ ಕೋನದ ಮಿತಿಗಳು ತಿಳಿಯಲು ಸಾಧ್ಯ.

**'ಲಾರೆನ್ಸ್ ಬಗ್ಗೆ ಬುವಾ' ಮಾತುಗಳಲ್ಲಿ ಹೇಳುವುದಾದರೆ,**

"ಭೇಷರತ್ತಾಗಿ ತಾನೂ ಅಧೀನಳೆಂದುಕೊಳ್ಳಲು ಒಪ್ಪು ಹೆಂಗಸೇ ನಿಜವಾದ ಹೆಂಗಸು , ಅಥವಾ ಅದೇ ನಿಜವಾದ ಹೆಂಗಸಿನ ಆದರ್ಶ. ಹೆಂಗಸ್ಸಿನ ನಿರೀಕ್ಷಿಸಿದ ಅಧೀನತೆಯ ಅಪೈಕ್ಷಕೆಯ ಅಭಿವ್ಯಕ್ತಿ ಹತ್ತಾರು ರೀತಿಗಳಲ್ಲಿವೆ. ಗಂಡಸು ಹೆಂಗಸರಿಬ್ಬರೂ ಅಂತರ್ಗತಗೊಳಿಸಿಕೊಂಡಿರುವ ಈ ಶ್ರೇಣಿಕರಣ ಒಂದು ಕಾಲಕ್ಕೆ ಪ್ರಶ್ನಾತೀತವಾಗಿ ಸ್ವೀಕಾರವಾಗಿದ್ದರೆ ಈಗಿನ ಸಂಕ್ರಮಣ ಕಾಲದಲ್ಲಿ ಆ ಶ್ರೇಣಿಕರಣದ ಅನಿವಾರ್ಯದಿಂದ ಒಡೆಯುವಿಕೆ ಒಗ್ಗಿ ಕೊಳ್ಳಲೂ ಇಬ್ಬರೂ ಹೆಣಗಾಡುತ್ತಿದ್ದಾರೆ. ನಷ್ಟದ ತುದಿಯಲ್ಲಿರುವ ಗಂಡಸಿನ ಸ್ಥಿತಿ ಕಠಿಣವಾದ ದ್ವೇಷ ಆಗಿದೆ. ಆದರೆ ಅದನ್ನು ಒಪ್ಪದೆ ಬದುಕು ಸಾಗದಾಗಿದೆ" ಎಂದುಹೇಳಿದ್ದಾರೆ.

**ಸ್ತ್ರೀ ಸಂವೇದನೆ**

'ಬದುಕಿನ ಹಾಗೂ ಸಮಾಜದ ಆಗು ಹೋಗುಗಳಿಗೆ ನಾವು ಸ್ಪಂದಿಸುವ ರೀತಿಯನ್ನು ಸಂವೇದನೆ' ಎನ್ನಬಹುದು. ನಿಜವಾಗಿಯು ಪುರುಷ ಮತ್ತು ಸ್ತ್ರೀ ಸಂವೇದನೆಗಳಲ್ಲಿ ಭಿನ್ನತೆ ಇದೆಯೇ? ಇದುವರೆಗಿನ ಲೇಖಕಿಯರೂ ಕೂಡ ಪುರುಷರ ಹಾಗೆಯೇ ಸ್ಪಂದಿಸುತ್ತಾ ಬಂದಿರುವುದನ್ನು ಮತ್ತು ಪುರುಷ ವಿಚಾರಗಳಿಂದ ಪ್ರಭಾವಿತವಾಗಿ ಅವರ ಸಂವೇದನೆಗಳು ರೂಪುಗೊಂಡಿರುವುದನ್ನು ನಮ್ಮ ಸಾಹಿತ್ಯ ಚರಿತ್ರೆಯಿಂದ ತಿಳಿಯಬಹುದಾಗಿದೆ. ನಿಜವಾಗಿಯೂ ಸ್ತ್ರಿ ಸಂವೇದನೆಗಳು ಯಾವ ರೀತಿ ಭಿನ್ನ ಎಂಬುದನ್ನು ತಿಳಿಸುವುದಕ್ಕೆ ಅಥವಾ ಗುರ್ತಿಸುವುದಕ್ಕೆ ಸಿಗುವ ಸಾಹಿತ್ಯಿಕ ಮಾಹಿತಿ ಬಹಳ ಕಡಿಮೆ

ಎಂದು ಹೇಳಬಹುದು. ಆದರೆ ನಮ್ಮ ಜನಪದ ಸಾಹಿತ್ಯದಲ್ಲಿ ಮಾತ್ರ ಸ್ತೀ ್ರ ಸಂವೇದನೆಗಳ ದಟ್ಟಪ್ರತಿಬಿಂಬವನ್ನು ಕಾಣಬಹುದಾಗಿದೆ.

ಸ್ತಿ ್ರಯರ ನೋವು ,ನಲಿವು, ದಾಂಪತ್ಯ, ವಿರಸ, ಮೊದಲಾದವುಗಳ ವಾಸ್ತವ ವಿವರಗಳನ್ನು ಜನಪದ ಸಾಹಿತ್ಯದಲ್ಲಿ ಗುರ್ತಿಸಬಹುದಾಗಿದೆ. ಈ ವಾಸ್ತವ ಮತ್ತು ಸಹಜತೆಗಳು 75 ರಿಂದೀಚೆಗೆ ಬಂದ ಬಹುಪಾಲು ಲೇಖಕಿಯರು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಕಾವ್ಯವನ್ನು ಆರಿಸಿಕೊಂಡಿದ್ದು ಗಮನಾರ್ಹ. ಪರೋಕ್ಷವಾಗಿ ಪುರುಷ ಕೇಂದ್ರಿತ ಮೌಲ್ಯಗಳ ಒಪ್ಪುವಿಕೆ ಮತ್ತು ಸಮಾಜ ಒಪ್ಪಿಕೊಂಡ ಮೌಲ್ಯದ ಪ್ರತಿಬಿಂಬಗಳು ಭಿನ್ನವಾಗಿವೆ. 75 ರಿಂದೀಚೆಗಿನ ಕವಿತೆಗಳು ಗಟ್ಟಿನಿಲುವಿನ ವ್ಯಕ್ತಿತ್ವವನ್ನು ವ್ಯಕ್ತ ಪಡಿಸಿದ್ದು ಗಮನಾರ್ಹ.

ಮೂಲಭೂತವಾಗಿಯೋ, ಸಾಮಾಜಿಕ ಸಾಂಸ್ಕೃತಿಕ ಕಾರಣಗಳಿಂದಾಗಿಯೇ ಮಹಿಳೆಯರ ಸಂವೇದನೆಗಳು ಪುರುಷ ಸಂವೇದನೆಗಳಿಗಿಂತ ಭಿನ್ನ. ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಸ್ತ್ರೀ ಪುರುಷರು ಭಿನ್ನವಾಗಿರುವುದರಿಂದ ಅವರ ಅನುಭವಗಳಲ್ಲಿ ಭಿನ್ನತೆ ಇದೆ. ಒಂದೇ ವಿಷಯವನ್ನು ಪುರುಷ ಗ್ರಹಿಸುವ ರೀತಿಯೇ ಬೇರೆ, ಹೆಣ್ಣು ಗ್ರಹಿಸುವ ರೀತಿಯೇ ಬೇರೆ. ಇವರಿಬ್ಬರ ದೃಷ್ಟಿಕೋನಗಳಲ್ಲಿ ಆಳವಾದ ವ್ಯತ್ಯಾಸಗಳಿವೆ. ಹೀಗಾಗಿ ಇವರ ಅಭಿವ್ಯಕ್ತಿಯ ಕ್ರಮವೂ ಸಹ ಭಿನ್ನವಾಗಿರುತ್ತದೆ. ಎಂದು ಸ್ತ್ರಿ ವಾದಿಗಳೂ ,ವಿಮರ್ಷಕರೂ ಅಭಿಪ್ರಾಯ ಪಡುತ್ತಾರೆ. ಸ್ವತಃ ಹೆಣ್ಣನ್ನು ಕುರಿತ ಗ್ರಹಿಕೆಯಲ್ಲಿಯೂ ಸ್ತ್ರೀ ಪುರುಷರ ದೃಷ್ಟಿಕೋನ ಬಹಳ ಭಿನ್ನವಾಗಿದೆ. ಪುರುಷ ಜಗತ್ತು ಸ್ತ್ರೀ ಸೌಂದರ್ಯ, ಮನಸ್ಸನ್ನು ಚಂಚಲಗೊಳಿಸುವ ಕೆಡುಕು ಎಂಬುದಾಗಿ ಭಾವಿಸುತ್ತದೆ. ಸ್ತ್ರೀ ದೇಹದ ಜೈವಿಕ ಪ್ರಕ್ರಿಯೆಗಳನ್ನು ಹೊಲೆ ಎಂದು ಪರಿಗಣಿಸಿ ಸ್ತ್ರೀಯರನ್ನು ದೂರವಿಡುತ್ತದೆ. ಋತುಸ್ರಾವ, ಪ್ರಸವಗಳಿಗೆ ಸೂತಕದ ಕಳಂಕ ಅಂಟಿಸುತ್ತದೆ. ಆದರೆ ಸ್ತ್ರೀ ಜಗತ್ತಿನಲ್ಲಿ ಈ ಮುಟ್ಟು ತಟ್ಟುಗಳೇ ಜೀವನದ ನಿರಂತರತೆಯ ಸೋತ್ರಗಳಾಗಿವೆ. ಸಂತೋಷ ಸಂಭ್ರಮಗಳಿಂದ ಅನುಸರಿಸಬೇಕಾದ ಸಂಗತಿಗಳಾಗಿವೆ. ಜನಪದ ಸ್ತಿ ್ರಯು ಪುರುಷರ ರೀತಿ ನೀತಿಗಳನ್ನು ನೇರವಾಗಿ ಪ್ರಶ್ನಿಸಿಲ್ಲವಾದರೂ ಅವುಗಳನ್ನು ಕುರಿತ ತಿರಸ್ಕಾರ ಅಥವಾ ಸದ್ದಿಲ್ಲದ ನಿರಾಕರಣೆಯೇ ಅವಳ ದೃಷ್ಟಿ ಏನೆಂಬುದನ್ನು ಹೇಳುತ್ತದೆ. ಮತ್ತು ಪುರುಷ ಜಗತ್ತಿನ ಪರಿಕಲ್ಪನೆಗಳ ಅಸಂಗತೆಯನ್ನು ಮನಗಾಣಿಸುತ್ತದೆ

ಆದರೆ ಇಂತಹ ಒಂದು ವಿಶಿಷ್ಟತೆ ತಮಗಿರುವುದನ್ನು ಸ್ವತಃ ಜನಪದ ಸ್ತಿ ್ರಯರೇ ಗಮನಿಸದಿರುವುದು ಒಂದು ವಿಪರ್ಯಾಸ. ಜನಪದ ಸ್ತ್ರೀಯರಲ್ಲಿ ಇರುವ ಹಾಗೆಯೇ ಶಿಷ್ಟ ಮಹಿಳಾ ಲೋಕದಲ್ಲಿಯೂ ಇದೆ. ತನ್ನಷ್ಟಕ್ಕೆ ಹೇಳಿಕೊಳ್ಳುವ ರಾಗಿ ಕಲ್ಲಿನ ಪದಗಳನ್ನು ಕಟ್ಟಿದ ಜನಪದ ಸ್ತ್ರೀ, ಶೀಲ ಪಾತಿವ್ರತ್ಯ ವಿದೇಯತೆಗಳಂತಹ ಪಿತೃ ಸಂಸ್ಕೃತಿ ಸ್ಥಾಪಿತ ಮೌಲ್ಯಗಳನ್ನು ಕೊಂಡಾಡುವ ಕಥನ ಗೀತೆಗಳನ್ನು ಹಾಡುವ ಮೂಲಕ ಅಂತಹ ಮೌಲ್ಯಗಳನ್ನೇ ಪ್ರಸಾರಮಾಡುತ್ತಾಳೆ. ನಮ್ಮ ಶಿಷ್ಟ ಲೇಖಕಿಯರೂ ಸಹ ಕಥೆ ಕಾದಂಬರಿಗಳಲ್ಲಿ ಇದೇ ಕೆಲಸ ಮಾಡುತ್ತಿದ್ದಾರೆ. ಪಂರಪರಾಗತ ನಿರೇಕ್ಷೆಗಳ ಕಾರಣವಾಗಿ ಇದುವರೆಗಿನ

ಮಹಿಳಾ ಸಾಹಿತ್ಯವು ಪುರುಷ ಪ್ರಧಾನ ವ್ಯವಸ್ಥೆಗೆ ಒಪ್ಪಿದೆಯೇ ಅದನ್ನು ಮಾತ್ರವೇ ಮತ್ತು ಅದರ ನಿರೀಕ್ಷಿತ ವಿಧಾನದಲ್ಲಿಯೇ ವ್ಯಕ್ತ ಪಡಿಸಿದೆ. ಮಹಿಳೆಯನಿಜವಾದ ಅನಿಸಿಕೆಗಳನ್ನು ಕಂಡು ಕೊಳ್ಳುವ ಶೋಧಿಸುವ ಪ್ರಯತ್ನವೇ ಇಲ್ಲಿ ಕಾಣುವುದಿಲ್ಲ. ಹೀಗಾಗಿ ಇದರ ವ್ಯಾಪ್ತಿಗೆ ಅತ್ಯಂತ ಸೀಮಿತವಾಗಿದ್ದು ಪುರುಷ ಪ್ರದಾನ ವ್ಯವಸ್ಥೆಯ ಆಶಯಗಳನ್ನೇ ಮುಂದುವರೆಸಿಕೊಂಡು ಬರುವಂಥದ್ದಾಗಿದೆ. ಎಲ್ಲಿಯ ತನಕ ಹೆಣ್ಣು ತನ್ನ ನಿಜವಾದ ಅನುಭವಗಳನ್ನು ಅನಿಸಿಕೆಗಳನ್ನು , ವ್ಯಕ್ತಿತ್ವವನ್ನು ಹೊರಗೆಡುವುದಿಲ್ಲವೋ ಅಲ್ಲಿಯತನಕ ಹೆಣ್ಣನ್ನು ಕುರಿತ ಸಾಮಾಜಿಕ ನಿರೀಕ್ಷೆಯಲ್ಲಿ ಯಾವ ಬದಲಾವಣೆಯೂ ಸಾಧ್ಯವಾಗುವುದಿಲ್ಲ. ಮಹಿಳೆಯ ಸ್ಥಿತಿ ಬದಲಾವಣೆಯಾಗಬೇಕಾದರೆ ಪ್ರಜ್ಞಾ ಪೂರ್ವಕವಾಗಿಯೇ ಈ ಪರಂಪರಾಗತ ನಿರ್ಬಂಧಗಳನ್ನು ನಿರೀಕ್ಷೆಗಳನ್ನು ಮುರಿಯಬೇಕು. ಎಂಬುದನ್ನು ಸ್ತ್ರಿವಾದಿ ವಿಮರ್ಶೆ ಕಂಡು ಕೊಂಡಿತು.

ಸ್ತ್ರೀವಾದಿ ವಿಮರ್ಶೆ ಈ ದಿಸೆಯಲ್ಲಿ ಕೆಲವು ಸ್ಪಷ್ಟವಾದ ಕಾರ್ಯಕ್ರಮಗಳನ್ನು ಯೋಜನೆಗಳನ್ನು ಹಾಕಿಕೊಂಡು ಒಂದೊಂದಾಗಿ ಕಾರ್ಯ ರೂಪಕ್ಕೆ ತಂದಿದ್ದನ್ನು ಸಮಕಾಲೀನ ಮಹಿಳಾ ಸಾಹಿತ್ಯ ಸಂದರ್ಭದಲ್ಲಿ ಗುರ್ತಿಸಬಹುದು.

ಬದಲಾಗುತ್ತಿರುವ ಮತ್ತುಬೆಳೆಯುತ್ತಿರುವ ಇಂದಿನ ಸಾಮಾಜಕ್ಕೆ ಶುಭ್ರ ಮನಸ್ಸುಗಳು ತುಡಿಯಬೇಕಾದುದು ಅಗತ್ಯವಾಗುತ್ತದೆ ಸ್ತ್ರೀ ಪುರುಷರು ಯಾವುದೇ ತಾರತಮ್ಯವಿಲ್ಲದೆ ನೊಂದ ಮನಕ್ಕೆ ಸ್ಪಂದಿಸುವುದು ಅಗತ್ಯ ಮತ್ತು ಅನಿವಾರ್ಯವಾದುದಾಗಿದೆ. ಆದ್ದರಿಂದ ಸಂವೇದನೆ ಎಂಬುದು ಎಲ್ಲರಲ್ಲಿ ಇರುವುದು ಬಹಳ ಮುಖ್ಯವಾದ ಅಂಶವಾಗಿದೆ ಎನ್ನಬಹುದು.

ಈ ವಿಮರ್ಶೆ ಮತ್ತು ಬೆಳವಣಿಗೆಗಳ ಅರಿವಿನಿಂದ ಕನ್ನಡದ ಮಹಿಳಾ ಕಾವ್ಯ ಮೂಡಿಬಂದಿದ್ದು ಮಾತ್ರ ಮೊದಲ ಬಾರಿಗೆ ಸ್ತ್ರೀ ಲೋಕದ ಅಂತರಂಗದ ಅನುಭವಗಳನ್ನು ಅಭಿವ್ಯಕ್ತಿಸುವಲ್ಲಿ ಪರಿಣಾಮಕಾರಿಯಾಗಿದೆ ಎನ್ನಬಹುದು.

# ಅಡಿ ಟಿಪ್ಪಣಿಗಳು

1) ಎನ್. ಗಾಯತ್ರಿ : ಮಹಿಳೆ : ಬಿಡುಗಡೆಯ ಹಾದಿಯಲ್ಲಿ ಪು. ಸಂ. 16

2) ಎನ್. ಗಾಯತ್ರಿ : ಮಹಿಳೆ : ಬಿಡುಗಡೆಯ ಹಾದಿಯಲ್ಲಿ ಪು. ಸಂ. 38

3) ಎನ್. ಗಾಯತ್ರಿ : ಮಹಿಳೆ : ಬಿಡುಗಡೆಯ ಹಾದಿಯಲ್ಲಿ ಪು. ಸಂ. 161

4) ಹೆಚ್.ಎಸ್.ಶ್ರೀಮತಿ : ಸ್ತ್ರೀವಾದ : ಪು.ಸಂ. 12

5) ಕನ್ನಡ ಸಾಹಿತ್ಯ ಅಕಾಡೆಮಿ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ ಪು.ಸಂ. 2

6) ಕನ್ನಡ ಸಾಹಿತ್ಯ ಅಕಾಡೆಮಿ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ ಪು.ಸಂ. 16

# ಅಧ್ಯಾಯ- 3

## ಕೆಲವು ಕವಯತ್ರಿಯರ ಕವಿತಾ ಸಂಕಲನಗಳು

70 ರ ದಶಕದ ಈಚೆಗಿನ ಮಹಿಳಾ ಸಾಹಿತ್ಯದ ಸಂದರ್ಭ ಈ ಹಿಂದಿನ ಎರಡು ಅವಧಿಗಳಿಗಿಂತ ಗಮನಾರ್ಹವಾಗಿ ಭಿನ್ನವಾಗಿದೆ. ರಾಜಕೀಯ, ಸಾಮಾಜಿಕ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಆದ ಬದಲಾವಣೆಗಳು ಸ್ತ್ರೀಯರಿಗೆ ದೊರೆತ ಉನ್ನತ ಶಿಕ್ಷಣ ಹಾಗೂ ಉದ್ಯೋಗಾವಕಾಶಗಳು, ಎಲ್ಲಕ್ಕಿಂತ ಮುಖ್ಯವಾಗಿ ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿ ಜಗತ್ತಿನ ಎಲ್ಲೆಡೆ ಹುಟ್ಟಿದ ಸ್ತ್ರೀವಾದಿ ಅಧ್ಯಯನಗಳ ಪ್ರಭಾವ ಈ ಅವಧಿಯ ಮಹಿಳಾ ಸಾಹಿತ್ಯದ ಸ್ವರೂಪದಲ್ಲಿ ಗಮನಾರ್ಹ ಬದಲಾವಣೆ ತಂದಿದೆ. ಸ್ತ್ರೀವಾದಿ ಚಿಂತನೆಗಳ ಫಲವಾಗಿ ಮಹಿಳಾ ಸಾಹಿತ್ಯದ ಸ್ವರೂಪ- ಗೊತ್ತು ಗುರಿಗಳನ್ನು ಕುರಿತಂತೆ ಖಚಿತವಾದ ಅಭಿಪ್ರಾಯ ರೂಪುಗೊಳ್ಳತೊಡಗಿದವು. ಇದರ ವ್ಯಾಪ್ತಿಗೆ ಒಳಪಡುವಂತಹ ಸಾಹಿತ್ಯದ ಸ್ವರೂಪ ಉದ್ದೇಶಗಳನ್ನು ಕುರಿತಂತೆ ಗಂಭೀರವಾದ ಚರ್ಚೆ ಆರಂಭವಾದದ್ದು 1975 ರ ನಂತರವೇ. ಸ್ತ್ರೀವಾದದ ವಿಚಾರಗಳನ್ನು ಮತ್ತು ಹೊಸ ಅರ್ಥಗಳನ್ನು ಮೈಗೂಡಿಸಿಕೊಂಡು ಬರೆಯುತ್ತಿರುವ ಬಹುತೇಕ ಲೇಖಕಿಯರು ಕವಿತೆಯನ್ನು ತಮ್ಮ ಪ್ರಧಾನ ಅಭಿವ್ಯಕ್ತಿ ಮಾದ್ಯಮವಾಗಿ ಆಯ್ಕೆ ಮಾಡಿಕೊಂಡಿದ್ದು ಬಹಳ ಮುಖ್ಯ, ಕವಿತೆ ಸ್ವಾನುಭವಗಳ ಅಭಿವ್ಯಕ್ತಿಗೆ ಒಂದು ಸಮರ್ಥವಾದ ಪ್ರಕಾರ ಇಲ್ಲಿ ಬಹುತೇಕವಾಗಿ ಅಂತರಂಗದ ಅನಿಸಿಕೆಗಳ ಒಂದು ಪ್ರಾಮಾಣಿಕ ಅಭಿವ್ಯಕ್ತಿ ಇರುತ್ತದೆ. ಇಂದಿನ ಬಹುತೇಕ ಲೇಖಕಿಯರು ಕವಿತೆಯನ್ನು ಅಭಿವ್ಯಕ್ತಿಯ ಮಾಧ್ಯಮಮಾಗಿ ಮಾಡಿಕೊಂಡಿರುವುದು ಇದೇ ಕಾರಣಕ್ಕಾಗಿ ವಚನಕಾರ್ತಿಯರನ್ನು ಬಿಟ್ಟರೆ ಇಷ್ಟೊಂದು ಸಂಖ್ಯೆಯಲ್ಲಿ ಮಹಿಳೆಯರು ಕವಿತಾರಚನೆಯಲ್ಲಿ ತೊಡಗಿರುವುದು ಮತ್ತು ತಮ್ಮ ಭಾವನೆಯನ್ನು ದಿಟ್ಟಹಾಗೂ ಸೂಕ್ಷ್ಮವಾಗಿ ವ್ಯಕ್ತಪಡಿಸಿರುವುದು ಬಹುಶಃ ಈ ಯುಗದಲ್ಲಿ ಮಾತ್ರವೇ ಅನಿಸುತ್ತದೆ. ಕಥೆ, ಕಾದಂಬರಿಗಳಲ್ಲಿ ಅಜ್ಞಾತ ಪಾತ್ರಗಳನ್ನು ಬಿಂಬಿಸಲು ಸಾಧ್ಯವಿಲ್ಲ. ಯಾವುದಾದರೊಂದು ಸನ್ನಿವೇಶದಲ್ಲಿ ಆ ಪಾತ್ರದ ಅನಾವರಣವಾಗಲೇಬೇಕು. ಆದರೆ ಕಾವ್ಯ ಮಾದ್ಯಮವೆಂಬುದು ಇದನ್ನು ಮೀರಿದ್ದು . ಅನಿಸಿಕೆ, ಅಭಿವ್ಯಕ್ತಿಯನ್ನು ನೇರವಾಗಿ ಅನಾವರಣ ಮಾಡುವ ರೂಢಿಗತ ಕ್ರಿಯೆ ಕಾವ್ಯ. ಇಂದಿನ ಯುಗಕ್ಕೆ ಸ್ತ್ರೀ ಮನಸ್ಸಿನ ಅಭಿವ್ಯಕ್ತಿಯನ್ನು ಆರೋಗ್ಯಕರವಾಗಿ ನೋಡಬೇಕಾದ ಸರಿಯಾದ ಕಾಲ ಇದಾಗಿದೆ. ಸ್ತ್ರೀಯ ಅನುಭವಲೋಕವನ್ನು ಪ್ರಧಾನವಾಗಿರಿಸಿಕೊಂಡು ಬರೆಯುತ್ತಿರುವ ಕವಿಯತ್ರಿಯರು ಇತ್ತೀಚೆಗೆ ಜಾಸ್ತಿಯಾಗಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು

ವಿಶಿಷ್ಟ ಅನುಭವಗಳನ್ನು ಪಡೆಯುತ್ತಾ ಬಂದಿರುವುದರಿಂದ ತಾನು ಪ್ರತ್ಯೇಕವಾಗಿ ಹೇಳಬೇಕಾಗಿರುವ ಅನುಭವ ಪ್ರಪಂಚ ಬೇರೊಂದಿದೆ. ಎಂಬುದು ಈ ಎಲ್ಲಾ ಲೇಖಕಿಯರ ದೋರಣೆಯಾಗಿದೆ.

**1) ಶಶಿಕಲಾವೀರಯ್ಯಸ್ವಾಮಿ**

ಉತ್ತರ ಕರ್ನಾಟಕದ ದೇಸೀ ಸೊಗಡಿನಿಂದ ವಿಶೇಷವಾಗಿ ಕಾವ್ಯ ಮಾದ್ಯಮದಲ್ಲಿ ಗುರ್ತಿಸಿಕೊಂಡ ಲೇಖಕಿ ಶಶಿಕಲಾರವರು ಹೆಣ್ಣಿನ ಮನದ ತಲ್ಲಣಗಳು , ನಿರೀಕ್ಷೆಗಳು, ನೋವುಗಳು , ತಮ್ಮೆಲ್ಲಾ ಕವಿತೆಗಳಲ್ಲೂ ಮಡುಗಟ್ಟಿ ನಿಲ್ಲುವಂತೆ ತಮ್ಮ ಭಾಷಾ ವೈವಿದ್ಯದ ಮೂಲಕ ಗುರ್ತಿಸಿಕೊಂಡವರು ಶಶಿಕಲಾ ಎನ್ನಬಹುದು. ಗುಬ್ಬೀಮನಿ (1979) ಪ್ರಶ್ನೆ (1982) ಜೀವ ಸಾವುಗಳ ನಡುವೆ (1984) ಹೆಂಗ ಹೇಳಲೇ ಗೆಳತಿ (1989) ಮಧ್ಯಂತರದ ಒಂದು ಗದ್ಯ ಗೀತೆ. (2004) ಎಂಬ ಐದು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಚರಿತ್ರೆಯಿಂದ ಆಧುನಿಕತೆಯವರೆಗೂ ಹೆಣ್ಣಿನ ಪಾರಂಪರಿಕ ಮೌಲ್ಯಗಳು, ಪಾತ್ರಗಳು, ಚಿತ್ರಿತಗೊಂಡ ಬಗೆ ಮತ್ತು ಪ್ರಸ್ತುತ ಸಾಮಾಜಿಕ ಸಮಸ್ಯೆಗಳ ಬಗ್ಗೆಯೂ ಚಿಂತನೆ ನೆಡೆಸುವ ಕವಿತೆಗಳು ಚಿತ್ರಿತಗೊಂಡಿವೆ. ಮೌನ ಮತ್ತು ಏಕಾಂತ ಪ್ರೀತಿಯನ್ನು ಸ್ವಭಾವತಃ ಮೈಗೂಡಿಸಿಕೊಂಡಿರುವ ಶಶಿಕಲಾರವರು ಹೆಣ್ಣಿನ ಮೂಲಕ, ಸಂವೇದನೆಗೆ ಬರವಣಿಗೆಯ ಮೂಲಕ ಕ್ರಿಯಾವಂತಿಕೆಯನ್ನು ಒದಗಿಸುತ್ತಾ ಬಂದಿದ್ದಾರೆ.

'ಹೆಂಗ ಹೇಳಲೇ ಗೆಳತಿ'- ಕವನ ಸಂಕಲನದಲ್ಲಿ-ನಾನು ರಾತ್ರಿಗಳನ್ನು ಮಾತ್ರ ಪ್ರೀತಿಸುತ್ತೇನೆ'. ಮೂಕರಾಗ, ಬದುಕಿಗೆ ನಮನ, ಕೊನೆ ಇಲ್ಲದ ಕವಿತಾ, ಮುಂತಾದವುಗಳು ಪ್ರಮುಖವಾದುವು. ಮಧ್ಯಂತರದ ಒಂದು ಗದ್ಯಗೀತೆ- ಕವನ ಸಂಕಲನದಲ್ಲಿ ಮುಗಿಯದೀ ಇರುಳು, ಒಂಟಿ ಮರ ಕಾಡುವ ಹುಡುಗರು ಮುಂತಾದವು.

ಶಶಿಕಲಾರವರೇ ಹೇಳುವಂತೆ

ನನ್ನವರ ಕವಿತೆಯು
ಕಳವಳದ ಕಾವಳದಲಿ ಮರೆತ ಮಾತೇ
ದಟ್ಟಡವಿಯ ಒಡಲ ಹಾಡಿನ ಮೌನಗೀತೆ.
ನನ್ನವರ ಕವಿತೆಯು
ಕತ್ತಲಲಿ ಅತ್ತತ್ತು ಕರೆದ ಕಂಬನಿ
ಮುಂಬೆಳಗಿನೆಲರಳಿದ ಹೂಗಳ ಇಬ್ಬನಿ

ನನ್ನವರ ಕವಿತೆಯು ತುಳಿ ತುಳಿದು ಹತ್ತಿಕ್ಕಿದ ಅಳಲು
ನೆಲದ ಎದೆಯನು ಬಗೆದು ಭೋರ್ಗರೆವ ತಡಸಲು

ನನ್ನವರ ಕವಿತೆಗೆ
ಸುಡುಕೋಪದಲ್ಲಿ ನೆತ್ತಿಗೇರಿದ ಅಮಲು
ಧರೆಯೊಡಲ ಮೇಲೆ ಹೊರಳಿ ಮೊರೆಯುವ ಕಡಲು
ನನ್ನವರ ಕವಿತೆಯಲಿ ಬೆಂದು ಬಸಳಿದವರ ಎದೆಯುರಿ
ರಕ್ತ ಬೀಜಾಸುರರ ನೊಣೆದು ನೆಕ್ಕುವ ಮಹಾ ಮಾರಿ.

ನನ್ನವರ ಕವಿತೆಯು
ಮನದುಂಬಿ ಹಾರೈಸಿ ನಕ್ಕ ನಗೆ
ನಿರಭ್ರ ರಾತ್ರಿಯಲಿ ನಿಶ್ಚಲನಿಂತ ಚಿಕ್ಕಿಯ ಬಗೆ

ಎಂಬ ಮಾತುಗಳು ಕಾವ್ಯ ಮಾಧ್ಯಮವೆಂಬುದು ಹೆಣ್ಣಿನ ವ್ಯಕ್ತಿತ್ವದ ಪ್ರತಿಬಿಂಬ ಎಂಬುದನ್ನು ಧ್ವನಿಸುತ್ತದೆ.

'ಹೆಂಗ ಹೇಳಲೇ ಗೆಳತಿ' ಕವನ ಸಂಕಲನದ 'ಮೂಕರಾಗ' ಕವಿತೆಯಲ್ಲಿ

ನನ್ನೆಲ್ಲ ಹಸಿ ಹಂಬಲಗಳಿಗೆ
ಬಿಸಿ ಬಯಕೆಗಳಿಗೆ
ಪೂರ್ವಕೆ ಯಾರತಿಯನ್ನೆತ್ತುವ
ಮೊದಲೇ ನಂದಿ ಹೋದ ದೀಪಕ್ಕಾಗಿ ನೊಂದಿದ್ದೇನೆ.
ಸುತ್ತ ಕುಣಿಯುತ್ತಿರುವ ನಯ ವಂಚಕರ ಭೂತ ನೃತ್ಯ
ಕಂಡು ಬೆದರಿದ್ದೇನೆ.

ರೆಕ್ಕೆ ಕತ್ತರಿಸಿ ಹಾರು ಎನ್ನುವ
ಕಾಲುಮುರಿದು ಓಡು ಎನ್ನುವ
ಹಿತ್ಯೆಷಿಗಳ ಹಿತ ನುಡಿಗೆ ಬೆರಗಾಗಿ
ಬೆರಳು ಕಚ್ಚಿದ್ದೇನೆ !

ಜೀವನೋತ್ಸಾಹ ಪುಟಿಯುತ್ತಿದ್ದರೂ ಜೀವನದಿಂದ ವಂಚಿತಳಾದ ಹೆಣ್ಣು ತನ್ನ ಬದುಕನ್ನು ಉರಿಯುವ ಮೊದಲೇ ಆರಿಹೋದ ದೀಪವಾಗಿ ಹಿತಶತೃಗಳ ಗಾಳಕ್ಕೆ ಸಿಕ್ಕ ಮೀನಾಗಿ ಒದ್ದಾಡುತ್ತಿದ್ದಾಳೆ. ಒಂಟಿಯಾಗಿ ಬದುಕಬೇಕೆಂಬ ಚಿಂತೆಯಿದ್ದರೂ ಬದುಕು ಸಾಗದಿದ್ದಾಗ ಉಸಿರು ಕಟ್ಟುವ ಕ್ರಿಯೆಯಲ್ಲೂ ಬದುಕುವ ಅದಮ್ಯ ಆಸೆ ಈ ಸಾಲುಗಳಲ್ಲಿ ಧ್ವನಿಸುತ್ತದೆ.

'ಕೊನೆ ಇಲ್ಲದ ಕವಿತಾ'ಕವಿತೆಯಲ್ಲಿ

ಮಕ್ಕಳ ತಲ್ಲಣಕ್ಕೆ ಮೂಕಾದಿ ತಾಯಿ

ಕನ್ನಡ ಅಂದರ ಎನ್ನಡ ಅಂದಾರು

ಬೆಳಗಾದ್ರ ಬೆಳಗಾವಿ ಕಸದಾರು

ಕಾಸರಗೋಡು

ಏಳವ್ವ ತಾಯಿ ಎದ್ದೇಳಯವ್ವಾ,

ದೇಶಭಕ್ತಿ ಮತ್ತು ಕನ್ನಡ ತಾಯಿಯ ಪ್ರೀತಿಗೆ ಮಣಿವ ವರ್ಗ ಒಂದೆಡೆಯಾದರೆ , ತಾಯಿ ನಾಡನ್ನೇ ಹರಿದು ಹಂಚಿ ರಕ್ತ ಕೋಡಿ ಹರಿಸುವ ವರ್ಗ ಮತ್ತೊಂದು ಕಡೆಯದು. ಕನ್ನಡ ಭಾಷೆ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಮನವರಿಕೆ ಮಾಡಿಸುತ್ತಾ, ಭಾರತ ಮಾತೆ ಮೂಕಳಾಗದೆ ಎಚ್ಚರಗೊಳ್ಳಬೇಕೆಂಬ ಆಶಯ ವ್ಯಕ್ತ ಪಡಿಸುತ್ತಾರೆ.

ಬಿ. 'ಬದುಕಿಗೆ ನಮನ'ಕವಿತೆಯಲ್ಲಿ

ಬಯಕೆಗಳು ಸುಟ್ಟಾಗ ಬಾಳು ಕಂಗೆಟ್ಟಾಗ

ಮತಿಗೆಟ್ಟು ಸಾಯದಂತಿರಲು

ಜೀವನದಿ, ಪ್ರೀತಿಯನ್ನು ಉಳಿಸಿರುವ

ಬದುಕೇ ನಿನಗೆ ನಮನ

ಬದುಕಿನ ಅನನ್ಯತೆಗೆ ಜೀವನ ಪ್ರೀತಿಗೆ ಹಿಡಿದ ಕನ್ನಡಿಯಂತೆ ಈ ಸಾಲುಗಳು ಮೂಡಿ ಬಂದಿವೆ. ಬಾಳಿನಲ್ಲಿ ಕಂಗೆಟ್ಟಾಗ ಬದುಕೇ ಜೀವನದಿಯಾಗಿ , ಸ್ಫೂರ್ತಿಯ ಸೆಲೆಯಾಗಿ ಮತ್ತೆ ಉತ್ಸಾಹ ತುಂಬಿದೆ. ಬಾಳಿನಲ್ಲಿ ಕಂಗೆಟ್ಟವರಿಗೆ ನೈತಿಕ ಸ್ಥೈರ್ಯವನ್ನು ತುಂಬುವ ಸಾಲುಗಳಾಗಿ ಮೂಡಿ ಬಂದಿರುವುದು ವಿಶೇಷ

.

ಒಟ್ಟಾರೆಯಾಗಿ ಶಶಿಕಲಾರವರ ಎಲ್ಲಾ ಕವನ ಸಂಕಲನಗಳ ಆಶಯ ಜೀವನ, ಬದುಕಿನ ರೀತಿ ಜೀವನೋತ್ಸಾಹ ತುಂಬಿದ ಬದುಕನ್ನು ಪಡೆಯುವ ಹಂಬಲ, ಆಧುನಿಕತೆಯ ತೆಳು ಸ್ಪರ್ಷದೊಂದಿಗೆ ಸ್ಪರ್ಧಾ ಮನೋಭಾವನೆಯನ್ನು ಬೆಳೆಸುವಂತ ಕವಿತೆಗಳು ಮೂಡಿ ಬಂದಿವೆ. ಓದುಗರೊಂದಿಗೆ ಸದಾ ಒಡನಾಡಿಯಾಗಿ ಪ್ರಸ್ತುತ ಸಾಮೂಹಿಕ ಸಮಸ್ಯೆಗಳನ್ನು ವಿಭಿನ್ನ ಮನಸ್ಥಿತಿಯೊಂದಿಗೆ ವಿಡಂಬಿಸುತ್ತಾ ಬದುಕಿನ ತೀವ್ರ ಹಂಬಲದ ವಿವಿಧ ಮಗ್ಗುಲುಗಳನ್ನು ಸಾಹಿತ್ಯದ ಮುಖಾಂತರ ಮುಖಾ-ಮುಖಿಯಾಗುತ್ತಿರುವವರು ಶಶಿಕಲಾ ವೀರಯ್ಯ ಸ್ವಾಮಿ ಎನ್ನಬಹುದು.

## 2. ಮಾಲತಿ ಪಟ್ಟಣ ಶೆಟ್ಟಿ

ಉತ್ತರ ಕರ್ನಾಟಕದ ದೇಸೀ ಸೊಗಡಿನ ಬರವಣಿಗೆಯಿಂದ ಕಾವ್ಯ ಮಾಧ್ಯಮದಲ್ಲಿ ಪ್ರಸಿದ್ಧರಾದವರು ಮಾಲತಿ ಪಟ್ಟಣ ಶೆಟ್ಟಿರವರು . ಕರ್ನಾಟಕದ ಖ್ಯಾತ ಕತೆಗಾರ್ತಿ,ಕವಿಯತ್ರಿ ಮಧ್ಯಮ ವರ್ಗದ ಉದ್ಯೋಗಸ್ಥ ಮಹಿಳೆಯ ನೋವು ನಲಿವುಗಳನ್ನು ದುಃಖ ದುಮ್ಮಾನಗಳನ್ನು ಸಮಸ್ಯೆಗಳನ್ನು ಕತೆ - ಕವಿತೆಗಳ ಮೂಲಕ ಬಿಂಬಿಸುವ ಲೇಖಕಿ ಮಾಲತಿರವರು ಎನ್ನಬಹುದು.

ಬಾ ಪರೀಕ್ಷೆಗೆ (1979) ಗರಿಗೆದರಿ (1983) ತಂದೆ ಬದುಕು ಗುಲಾಬಿ( 1988) ದಾಹತೀರ (1994) ಕವಿತೆ 1996 (1997) ಮೌನ ಕರಗುವ ಹೊತ್ತು (1999) ಹಿಗೆ ಅಧು ಕವನ ಸಂಕಲನಗಲ್ಲಿ ಪ್ರಕಟಿಸಿರುವ ಮಾಲತಿ ಶೆಟ್ಟಿಯವರ ಆಯ್ದ ಕವನಗಳನ್ನು ಹೋರಾಡಿ ಎಂಬಸಂಕಲನ ಇತ್ತೀಚೆಗೆ ಪ್ರಕಟವಾಗಿದೆ.

ದಾಹತೀರ ಕವನ ಸಂಕಲನ ಆತ್ಮೀಯವಾಗಿ ಹೃದಯದೊಳಗಿನ ಮಾತುಗಳನ್ನು ತೆರೆದಿಡುವ ಸಮರ್ಥ ಪ್ರಯತ್ನವಾಗಿದೆ. ಎಲ್ಲಾ ಕವಿತೆಗಳಲ್ಲೂ ಸ್ತ್ರೀವಾದಿ ಚಿಂತನೆಗಳು ಮತ್ತು ಹೊಳಹುಗಳು ಮಿಂಚುತ್ತವೆ.

ಈ ಸಂಕಲನದಲ್ಲಿ ಗಂಡಾ- ಗಂಡು ವಿಚಾರಾ , ನಿನ್ನ ನನ್ನ ನಡುವೆ, ತೆರೆದಿಡು ಹೃದಯಕದ ಮುಂತಾದ ಕವಿತೆಗಳು ಗಮನಾರ್ಹವಾಗಿವೆ.

ಗರಿಗೆದರಿ : ಸಂಕಲನದಲ್ಲಿ ಪ್ರಾಮಾಣಿಕ ಒಳನೋಟ, ಸ್ವಾಭಿಮಾನ , ಶೋಷಣ, ದೂರ ಸ್ವಾತಂತ್ರ್ಯ ಇವನ್ನು ಗಳಿಸಿ ಉಳಿಸಿಕೊಳ್ಳುವಲ್ಲಿ ಒಂದು ಹೆಣ್ಣು ಜೀವ ಪಡುವ ತುಯ್ತ : ಬವಣೆಯ ನಂತರದ ದಿಟ್ಟತನ, ಕಟುವಾಗಿಯೂ ಮಿದುತನಕ್ಕೆ ಒಳಗಾಗುವ ಹೆಣ್ತನದ ಸಹಜತೆಗಳು ಈ ಕವಿತೆಯಲ್ಲಿ ವಸ್ತ ಮತ್ತು ಭಾವ ಸ್ಥಿತಿಗಳಾಗಿ ಮಾರ್ಪಟ್ಟಿವೆ. ಪ್ರೇಮಪಾಠ, ನಾಳೆಗಳು, ಒಂದು ಪ್ರಶ್ನೆ ಮುಂತಾದ ಕವನಗಳು ಪ್ರಮುಖವಾಗಿ ಕಂಡು ಬರುತ್ತವೆ.

ತಂದೆ ಬದುಕು ಗುಲಾಬಿ : ಸಂಕಲನದಲ್ಲಿ ವ್ಯಕ್ತಿಗತ ಭಾವನೆಗಳು ಮತ್ತು ಅನುಭವಗಳು ಸಾಮಾಜಿಕ ಬದುಕಿನಲ್ಲಿ ಮಹತ್ವತೆ ಪಡೆಯುತ್ತಾ , ಕಾವ್ಯದ ಸೂಕ್ಷ್ಮತೆಗಳು ಕಲಾತ್ಮಕವಾಗಿ ಚಿತ್ರಿತಗೊಂಡಿವೆ.

ಸಹಗಮನ, ನನ್ನ ಚಿತ್ರಕಾರ, ನನ್ನ ಹಾದಿಯಲ್ಲಿ ಮುಂತಾದ ಕವಿತೆಗಳು ಕಂಡು ಬರುತ್ತವೆ.

ಮೌನ ಕರಗುವ ಹೊತ್ತು : ಸಂಕಲನದಲ್ಲಿ ಸಾವಿರದ ನಾಳೆಗಳು , ಬಂಗಾರದ ಹೆಜ್ಜೆ ಒಂದು ಬೊಗಸೆ ಬದುಕು ಮುಂತಾದ ಕವಿತೆಗಳಿವೆ.

'ಸಾವಿರದ ನಾಳೆಗಳು' ಕವಿತೆಯಲ್ಲಿ

ಯಾರು ಬದುಕುತ್ತಾರೆ
ಸತ್ತ ನಿನ್ನೆಗಳಲ್ಲಿ
ಬೆಳ್ಳಿ ಚಿಕ್ಕಿ ನಗುವಾಗ ?

ಸಾವಿರದ ನಾಳೆಗಳ
ಸಾವಿರ ಹೂನಗೆ ಮಗಳ
ಚಂದ್ರ ಮೊಗದಲಿ ಜಿಗಿಯುತಿದೆ
ನನ್ನ ಹರೆಯದ ಬೆಳದಿಂಗಳು!

ಬದುಕು ಎಂಬುದು ಸದಾ ಸತ್ವ ಪೂರ್ಣವಾಗಿರುವಾಗ, ಸದಾ ಜೀವಂತಿಕೆ ಬಯಸುವ ನಾಳೆಗಳು ಮನುಷ್ಯನಿಗೆ ಸಂಪೂರ್ಣತೆ ತಂದು ಕೊಡುತ್ತಿವೆ. ಸದಾ ಬಂಧನದಲ್ಲಿ ಬಂಧಿಸುವ ಹೆಣ್ಣಿನ ಹೆಣ್ತನದ ಮೌಲ್ಯಗಳು ಕೇವಲ , ಕಳೆದು ಹೋದ, ಹಳಸಲಾದ ನಿನ್ನೆಯ ದಿನಗಳಾಗುತ್ತವೆ ಆದರೆ ಪಾರಂಪರಿಕವಾಗಿ ನೋವುಂಡು ಬಂದ ಹೆಣ್ಣು ಸತ್ತ ನೆನ್ನೆಗಳಲ್ಲಿ ಜಿಗಿಯುವ ಹೊಸ ದಿಗಂತವನ್ನು ಒಂದು ಕ್ರಿಯಾತ್ಮಕತೆ ಕಂಡು ಬಂದಿದೆ.

'ವಿಪ್ರಲಂಭ' ಕವಿತೆಯಲ್ಲಿ

ಮಲ್ಲಿಗೆ ಎದೆಗಳು
ಝಲ್ಲೆಂದು ಬಿರಿದಾವ

ದುಂಡು ಮುಖದರಸಿ ಬೆದರ್‍ಯಾಳ

ದುಂಡು ಮುಖದರಸಿ ಬೆದರ್‍ಯಾಳ ಕಂಡು

ಎರಗಿ ಬರುವ ದುಂಬಿ ಹಿಂಡು

ಕಾಮನ ಸುಟ್ಟರೂ

ಕಾಮಿನಿ ಬಿಡಲಿಲ್ಲ

ಭಾಮೆ ಪಾರೋತಿ ಗೆದ್ದಾಳೋ

ಭಾಮೆ ಪಾರೋತಿಗೆದ್ದಾಳೋ ಸನ್ಯಾಸೀನ

ನಿಮಗ್ಯಾಕೆ ರಾಯ ಸನ್ಯಾಸೀನ

ಜಾನಪದ ಸೊಗಡು, ಸತ್ವಯುತವಾಗಿಮತ್ತುಕಲಾತ್ಮಕವಾಗಿ ಮೂಡಿ ಬಂದಿದೆ. ಪೌರಾಣಿಕ ನೆಲೆಯ ಪಾತ್ರಗಳಿಗೆ ಜೀವ ತುಂಬಿ ಬದುಕಿನಲ್ಲಿ ಪ್ರೇಮ ಕಾಮದ ತುಡಿತಗಳು ಸದಾ ಹಸಿರಾಗಿಯೇ ಇರುತ್ತದೆ. ಎಂಬುದನ್ನು ಧ್ವನಿಸುತ್ತಾ ' ಕಾಮನ ಸುಟ್ಟರೂ ಕಾಮಿನಿ ಬಿಡಲಿಲ್ಲ ' ಎಂಬ ಮಾತುಗಳು ಹೆಣ್ತನದ ಮೂಲಕ ಜೀವಂತ ಪಡೆದಿವೆ. ಹಸಿರು, ಕೋಗಿಲೆ, ಮಾವಿನ ಮಿಡಿ, ಬೇವಿನ ಚಿಗುರು, ಜೀವನೋತ್ಸಾಹ ತುಂಬುವ ಚೈತನ್ಯ ಮೂರ್ತಿಗಳಂತೆ ಬಿಂಬಿತವಾಗಿವೆ.

ದಾಹತೀರ : ಸಂಕಲನದ ' ಗಂಡಾ- ಗಂಡು ವಿಚಾರ' ಕವಿತೆಯಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಗಂಡು ಎಂಬ ಶಬ್ದ ಕೇಳಿದೊಡನೆ ಅಧಿಕಾರಯುತ ಮೌಲ್ಯ ತನಗೆ ತಾನೇ ಬಂದುಬಿಡುತ್ತದೆ. ಇದನ್ನು ಪ್ರಶ್ನಿಸುವ ಧೈರ್ಯಕ್ಕಿಂತ , ಆಲೋಚನೆ ಮಾಡುವ ಮನಸ್ಸುಗಳು ಆಲೋಚನೆಗೆ ಮುಂಚಿತವಾಗಿಯೇ ಮಾಗಿ ಬಿಡುತ್ತವೆ. ಗಂಡಾಗಿ, ಗಂಡನಾಗಿ ಉಳಿದ ಪುರುಷನ ಮೌಲ್ಯ ' ಗಂಡು ಗಂಡು ವಿಚಾರ '

ಗಂಡು ಆಗದ ಗಂಡ್ರ ಬಾಳಾರಿ

ಗಂಡಾ ಆಗದಾ ಗಂಡಸರು ಬಲು ಡೇಂಜರ್‍ರಿ!

ತನಗಾ ತಾ ಗಂಡಾಗಿ

ತನ್ನೊಳಗ ತಾ ಹೆಣ್ಣಾಗಿ

ಹೆಣ್ಣೀಗೆ ತನದ ಗಂಡಾ ಹುಟ್ಟೆದ್ರಿ

ಇನ್ನು ಹುಟ್ಟೆದ್ರಿ !

ಇನ್ನು ಹುಟ್ಟೆದ್ರಿ !

ಗಂಡಿನ ಬಗ್ಗೆ ತಾತ್ಸಾರವಾಗಲೀ , ದ್ವೇಷ ಮನೋಭಾವನೆಯಾಗಲೀ ಧ್ವನಿತವಾಗದೆ, ಹೆಣ್ಣಿನೊಂದಿಗೆ ಬದುಕು ನಡೆಸುವ ಪುರುಷನ ಒಳ ಅಂತರಂಗವನ್ನು ಬೇಧಿಸಿದ ಸಾಲುಗಳ ಮೂಡಿವೆ. **ಮೌನ ಕರಗುವ ಹೊತ್ತು** ಸಂಕಲನವನ್ನು ಕುರಿತು ಮುನ್ನುಡಿಯಲ್ಲಿ 'ನಿಸಾರ್ ಅಹಮದ್'ರವರು ಇವೊತ್ತಿನ ಕನ್ನಡ ಕಾವ್ಯಕ್ಕೆ ಕವಯತ್ರಿಯರು ಕೂಡಿಸುತ್ತಿರುವ ಸತ್ವದ ಧಾತುಗಳು ಗಣನೀಯವಾಗಿವೆ. ಎರಡು ,ಮೂರು ದಶಕಗಳ ಹಿಂದೆ ತೊರೆಯುತ್ತಿದ್ದ ಮಹಿಳೆಯರ ಕವಿತಾ ರಚನೆಯ ಸಂಭಮೋತ್ಸವ ಇವೊತ್ತು ನರೆಯುಕ್ಕಿಸಿಕೊಂಡ ನದಿಯಂತೆ ಮುನ್ನುಗ್ಗುತ್ತಿರುವ ದೃಶ್ಯ ಚೇತೋಹರವಾಗಿ ಭೇಷ್ ಎನ್ನಿಸುವಂತಿದೆ. ಸಂಖ್ಯೆಯ ಗಣನೆಯಿಂದ ಮಾತ್ರವಲ್ಲದೆ ಗುಣದ ನಿಟ್ಟಿನಿಂದ ಪರಿಶೀಲಿಸಿದರೂ ಕೆಲವು ಕವಯತ್ರಿಯರು ಮೆಚ್ಚುಗೆಗೆ ಪಾತ್ರವಾಗುವ ಕಾಯಕವೆಸಗುತ್ತಿದ್ದಾರೆ. ತಮಗೆ ವಿಶಿಷ್ಟವಾದ ಬದುಕಿನ ನೇ ಪಥ್ಯದ ಕೆಲವು ಅಪರೂಪದ ವಿದ್ಯಮಾನಗಳ ಒಳ ಹೊಳಹುಗಳನ್ನು ನಿಸ್ಸಂಕೋಚ, ನಿರ್ಬಿಡೆಗಳಿಂದ ಕಾಣಿಸುವಲ್ಲಿ ಕೃತಾರ್ಥರಾಗುತ್ತಿದ್ದಾರೆ. ಇಂದಿನ ಲೇಖಕಿಯರು ದಮನಿತ ಸ್ತ್ರೀ , ಸಮಾಜದ ಮೂಕವೇದನೆಯ ದನಿಯಾಗಲು, ಸಂವೇದನೆಯ ಅಬಿವ್ಯಕ್ತಿಯಾಗಲು ಮುಂದಾಗುತ್ತಿರುವುದು ಶ್ಲಾಘನೀಯ ವಿಚಾರ, ಈ ಲೇಖಕಿಯರಲ್ಲಿ ಒಡ ಮೂಡುತ್ತಿರುವ ಸ್ವ ವಿಶ್ವಾಸ, ಸರಿ ಸಮಾನತೆಯ ಹಕ್ಕೊತ್ತಾಯ, ದಿಟ್ಟ ಹಾಗೂ ಆಕ್ರೋಶ ಪೂರ್ಣವಾಗಿ ಸಾಮಾಜಿಕ ಅನ್ಯಾಯ ಶೋಷಣೆಗಳನ್ನು ಮಾತು ಮತ್ತು ಬರಹಗಳಲ್ಲಿ ಹರವಿಡುತ್ತಿರುವ ರೀತಿ, ಪುರುಷ ಪ್ರಧಾನ ಸಮಾಜವನ್ನು ಲೇವಡಿಸಿ ಅದರ ತಪ್ಪುಗಳನ್ನು ಮನವರಿಕೆ ಮಾಡಿಕೊಳ್ಳಲು ಸಾಂಗಿಕವಾಗಿ ಸಂಘಟಿಸುತಿತ್ರುವ ಪರಿ- ಹೊಸದೊಂದು ಪರಿತರ್ವನಾ ಶೀಲ ಬಂಡಾಯಕ್ಕೆ ನಾಂದಿ ಹಾಡಿದಂತಿದೆ . ಹಲವರಲ್ಲಿ ಈ ಸನ್ನಾಹ ಸಿಟ್ಟು ಆಕ್ರೋಶಗಳ ಪುರುಷ ನಿಂದೆಯಲ್ಲಿ ಪುರುಷಾರ್ಥವನ್ನು ಕಾಣುತ್ತಿದ್ದರೆ ಕೆಲವರಲ್ಲಿ ಮಾತ್ರ ಬದುಕಿನ ನಿಷ್ಠುರ ವಾಸ್ತವವನ್ನು ಸಮಚಿತ್ತದಿಂದ ಗ್ರಹಿಸುವ ಸಂಯಮ ಪೂರ್ಣ ದೋರಣೆಯನ್ನು ತಳೆದಿದೆ. ಆರೋಗ್ಯಕಾರಿ ಮತ್ತು ಸಮಹಿತವಾದ ಭವಿಷ್ಯೋನ್ಮುಖ ದೃಷ್ಟಿಯಿಂದ ಭೂತ ಮತ್ತು ವರ್ತಮಾನಸ್ಥ ಆಗು ಹೋಗುಗಳನ್ನು ವಿಶ್ಲೇಷಿಸಿ ಅರ್ಥೈಸಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸಿದೆ.

ಆದ್ದರಿಂದ ಮಾಲತಿಯವರ ಎಲ್ಲಾ ಕವಿತೆಗಳು ಸ್ತ್ರೀ ಸಂವೇದನೆಯ ಜೊತೆಗೆ ಸಮಾಜದೊಂದಿಗೆ ನಿರಂತರ ಒಡನಾಟವನ್ನು ಹೊಂದಿವೆ ಎನ್ನಬಹುದು.

**3. ಪ್ರತಿಭಾ ನಂದ ಕುಮಾರ್**

ಮಹಿಳಾ ಕಾವ್ಯ ನಿಜಕ್ಕೂ ಕನ್ನಡ ಕಾವ್ಯದ ಆಯಾಮವನ್ನು ಅನೇಕ ರೀತಿಯಲ್ಲಿ ಹಿಗ್ಗಿಸಿದೆ ಸ್ತ್ರೀಯರ ಅನುಭವಗಳ ದಾಖಲೆಯಾಗಿ ಈ ಕಾವ್ಯಕ್ಕೆ ವಿಶೇಷ ಮಹತ್ವವಿದೆ. ಒಬೊಬ್ಬ ಕವಿಯತ್ರಿಯೂ ತನ್ನದೇ ಆದ ಲೋಕಾನುಭವವನ್ನು ತಮ್ಮ ಕವಿತೆಗಳಲ್ಲಿ ಮೇಳೈಸಿದ್ದಾರೆ. ಈ ತಲೆಮಾರಿನ ಅತ್ಯಂತ ಮುಖ್ಯ ಕವಯತ್ರಿಯಾಗಿರುವ ಪ್ರತಿಭಾನಂದ ಕುಮಾರ್ ಅವರು ಕಾವ್ಯ ಮಾಧ್ಯಮದಲ್ಲಿ ತುಂಬಾ ಗಂಭೀರವಾಗಿ ತೊಡಗಿಸಿಕೊಂಡವರು. ಪುರುಷ ಜಗತ್ತಿನ ನಯವಂಚನೆ, ಪೆದ್ದುತನ, ಅಜ್ಞಾನ , ನಾಚಿಕೆಗೇಡಿತನಗಳನ್ನು, ತೋರಿಕೆಯ ದಾಂಪತ್ಯ, ಎದೆಯಿಂದ ಹೊರಗೆ ಬರದೆ ಒಳಗೇ ಹರಿದಾಡಿ ಭುಸುಗುಡುವ ಹೆಣ್ಣಿನ ಅಂತರಂಗಗಳು, ಕನವರಿಕೆಗಳು, ಗಂಡು ಹೆಣ್ಣಿನ ಸಂಬಂಧದ ಬಗ್ಗೆ ಸಮಾಜದ ಅನಗತ್ಯವಾದ ರಾಕ್ಷಸೀ ಕುತೂಹಲ ಮುಂತಾದುವೆಲ್ಲ ಇವರಪದ್ಯಗಳಲ್ಲಿ ವ್ಯಂಗ್ಯ ವಿಡಂಬನೆ, ಹಾಸ್ಯಗಳಲ್ಲಿ ಬೆರತು ಪರಿಣಾಮಕಾರಿಯಾಗಿ ಮೂಡುತ್ತವೆ . ಹೆಣ್ಣು ಇವರ ಎಲ್ಲಾಕವಿತೆಗಳ ಕೇಂದ್ರವಾದರೂ, ಇದು ಏಕತಾನದ ಪಾತ್ರವಾಗದೆ, ಪ್ರೇಮಿಯಾಗಿ, ಹೆಂಡತಿಯಾಗಿ ಮಕ್ಕಳ ತಾಯಾಗಿ ಪುರುಷಸಮಾಜದ ದ್ವಂದ್ವ ನೀತಿಗೆ ಸಿಲುಕಿ ಪುರುಷ ಸ್ವಭಾವದ ಸ್ತ್ರೀಯಾಗಿ ಇಲ್ಲಿ ಕಾಣಿಸಿಕೊಂಡಿದ್ದಾಳೆ. ಪ್ರತ್ಯೇಕವಾಗಿ ಸ್ತ್ರೀವಾದಿ ಕವನಗಳು ಎಂದೆನ್ನಿಸದ ಕಲಾವಂತಿಕೆಯಲ್ಲಿ ಅವು ಮೈ ತಳೆಯುತ್ತಿವೆ. ಸ್ತ್ರಿ ಪರವಾಗಿದ್ದರೂ ಹಾಗೆನ್ನಿಸದ ಗಂಡಿನ ಎಲ್ಲಾ ದೌರ್ಬಲ್ಯ ಅಹಂಕಾರಗಳನ್ನು ಕಂಡೂ ಅವನನ್ನು ದ್ವೇಷಿಸದ ವಿಶಿಷ್ಟ ನಿಲುವಿನಿಂದ ಪ್ರತಿಭಾ ಕವಿತೆಗಳು ಇತರ ಕವಿಯತ್ರಿಯರಿಗೆ ಭಿನ್ನವಾಗಿ ನಿಲ್ಲುತ್ತವೆ. ನಾವು ಹುಡುಗಿಯರೇ ಹೀಗೆ , ಈ ತನಕ, ರಸ್ತೆಯಂಚಿನ ಗಾಡಿ (1991) ಆಹಾ, ಪುರುಷಾಕಾಂರಂ (2000) ಮುಂತಾದ ಕವನ ಸಂಕಲನಗಳು ಪ್ರಕಟಗೊಂಡಿವೆ. ರಸ್ತೆಯಂಚಿನಗಾಡಿ ಕವನ ಸಂಕಲನ ಮುದ್ದಣ್ಣ ಕಾವ್ಯ ಪ್ರಶಸ್ತಿಯನ್ನು ಪಡೆದ ಕೃತಿಯಾಗಿದೆ. ಈ ಸಂಕಲನದಲ್ಲಿ ಮರೀಚಿಕೆ, ಮೌನ, ಬಿಸಿಲು ಕುದುರೆ, ಮುಖವಾಡ, ರಸ್ತೆಯಂಚಿನ ಗಾಡಿ ಮುಂತಾದ ಗಮನಾರ್ಹ ಕವನಗಳಿವೆ.

**ಆಹಾ, ಪುರುಷಾಕಾರಂ!** ಕವನ ಸಂಕಲನದಲ್ಲಿ, ಆಹಾ ಪುರುಷಾಕಾರಂ! ನಾನು ಚಾಂಡಾಲ ಕನ್ಯೆ ಎಲ್ಲವನ್ನೂ ಕಳೆದುಕೊಂಡ ಮೇಲೆ, ಹೆಣ್ಣಿನ ಹೃದಯವೊಂದು ಸ್ಮಶಾನ ಮುಂತಾದ ಕವಿತೆಗಳು ಪ್ರಮುಖವಾದವು.

ಸಂದ ಪ್ರಸಶ್ತಿಗಳು : ಮುದ್ದಣ್ಣ ಸ್ಮಾರಕ ಕಾವ್ಯ ಪ್ರಶಸ್ತಿ , ಡಾ, ಶಿವರಾಮ ಕಾರಂತ ಪ್ರಶಸ್ತಿ ಪು.ತಿ.ನ. ಕಾವ್ಯ ಪ್ರಶಸ್ತಿ , ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಬಿ.ಹೆಚ್. ಶ್ರೀಧರ್ ಪ್ರತಿಷ್ಠಾನ ಪ್ರಶಸ್ತಿ ಇತ್ಯಾದಿ.

'ಮೊಗೆತ' ಕವಿತೆಯಲ್ಲಿ

ಹೇಗೆ ಸೇದುತ್ತಾಳಮ್ಮ ಬಾವಿಯಿಂದ ನೀರು
ಥೇಟು ಅವರಮ್ಮನ ಹಾಗೇ
ಇಡೀ ಮನೆಯ ಜನರ ಜಳಕಕ್ಕೆ
ಇಡೀ ಬಟ್ಟೆ ಪಾತ್ರೆ ಹೂವಿನ ತೋಟಕ್ಕೆ
ಒಮ್ಮೆ ನಿಲ್ಲಿಸಿ ಕುಡಿಯಲು
ಗಂಗೆ ಹಸುವಿನ ಹಾಲು ಕೊಟ್ಟಿದ್ದೆ
ಕ್ಷಣ ನಿಂತು ಕುಡಿದು ಬೀಸಿ ಬೀಸಿ
ಸೇದಿದ್ದಳು ಇಪ್ಪತ್ತುಕೊಡ ಹೆಚ್ಚು

ಆದರೆ ನನ್ನಲ್ಲಿ ಕೊಡವಿಲ್ಲ ಹಗ್ಗವಿಲ್ಲ
ನನ್ನ ಬೆರಳುಗಳ ನಡುವೆ
ಸುಮ್ಮಾನದಲ್ಲಿ ಸಿದ್ದವಾಗಿದೆ ಪೆನ್ನು
ನಾನು ಅದರಿಂದ ಮೊಗೆಯುತ್ತೇನೆ.

ಅಕ್ಷರ ಕಲಿತ ಹೆಣ್ಣಿನ ಕೈಗಳಲ್ಲಿ ಪೆನ್ನಿದೆ, ಈ ಪೆನ್ನಿನಿಂದ ಸಮಾಜದ ಆಗು - ಹೋಗುಗಳು ಮತ್ತು ಹೆಣ್ಣಿನ ಮಾನಸಿಕ ವೇದನೆಯನ್ನು ಮೊಗೆಯುವ ಕ್ರಿಯೆ. ಅಕ್ಷರ ಕಲಿಯದ ಹೆಣ್ಣು ಸಂಸಾರಕ್ಕಾಗಿ ಕೊಡಕ್ಕೂ ಬಾವಿಗೂ ಅಂತರವಿರುವ ನೀರನ್ನು ಮೊಗೆಯುವ ಕ್ರಿಯೆ ಎರಡೂ ಮೂಡಿಬಂದಿವೆ. ಪಾರಂಪರಿಕ ಮೌಲ್ಯಗಳು ನೇರವಾಗಿ ಭಂಜಿಸುತ್ತಾ ವಿಡಂಬಿಸುವುದನ್ನು ಕಾಣುತ್ತೇವೆ.

<u>ನಾವು 'ಹುಡುಗಿಯರೇ ಹೀಗೆ' ಕವಿತೆಯಲ್ಲಿ</u>

ಗೆಳತಿಯೊಂದಿಗೆ , ಎಲ್ಲ ಹೆಣ್ಣುಗಳ ಮನದ ಮಾತನ್ನು ಬಿಚ್ಚಿಡುವ ಒಂದು ಸಂವಾದದ ಮೂಲಕ ಭಾವನೆಗಳ ಹೊರ ಹಾಕುವಿಕೆ ಕಂಡು ಬರುತ್ತದೆ.

ಗಂಡನಲ್ಲಿ ಅವನನ್ನು ಹುಡುಕುತ್ತೇವೆ
ಗಂಡನಿಗೆ ಮಾತ್ರ ಅದರ ಸುಳಿವೂ ಸಿಗದಂತೆ ನಟಿಸುತ್ತೇವೆ.

ಅಪ್ಪರಲ್ಲಿ ಒತ್ತಿಟ್ಟ ಭಾವನೆಗಳೆಲ್ಲಾ ಹರಳಾಗಿ ಬಿಟ್ಟಿರುತ್ತವೆ.

ಅರಳುವುದೇ ಇಲ್ಲ ಉಷಾ

ಅದರೆ ಮೇಲೆ ನಗುತ್ತಾ 'ಅವನ'

ಹೆಂಡತಿ ಮಕ್ಕಳ ಯೋಗ ಕ್ಷೇಮ ವಿಚಾರಿಸುತ್ತೇವೆ.

ಯಾಕೆಂದರೆ ಅವಳದೂ ಅದೇ ಕಥೆಯಲ್ಲವೇ?

ನಾವು ಹುಡುಗಿಯರೇ ಹೀಗೆ....

ಪ್ರಿಯತಮನೊಂದಿಗೆ ಪ್ರೀತಿ ವ್ಯಕ್ತ ಪಡಿಸಲಾಗದೆ ಚಡಪಡಿಸಿ ಆ ಪ್ರೀತಿ ಸಫಲವಾಗದಿದ್ದಾಗ ಮೂಡುವ ಹತಾಷೆ, ನೋವು ಮದುವೆಯೊಂದಿಗೆ ಅಂತ್ಯ ಕಾಣುತ್ತೇವೆ. ತನ್ನ ಗಂಡನಲ್ಲಿ ಅವನನ್ನು ಹುಡುಕುವ ಕ್ರಿಯೆಯಲ್ಲಿ ಭಾವನೆಗಳು ಬೇರೊಂದು ಮಗ್ಗುಲನ್ನು ಪಡೆದಿರುತ್ತವೆ. ಎಂದಾದರೊಂದು ದಿನ ಅವನು ಎದುರಾದಾಗ ಅವನ, ಮಕ್ಕಳ ಹೆಂಡತಿಯನ್ನು ವಿಚಾರಿಸುವ ಪರಿ ಆ ಹೆಣ್ಣಿನ ಮೂಲಕ ವೇದನೆಯ ಕಥೆಯನ್ನು ಬಿಂಬಿಸುತ್ತವೆ.

ಕೇರ್ ಫ್ರೀ ಮಹಿಳೆಯರು ಮತ್ತು ಹಿಮದ ಹಾದಿ ಕವಿತೆಗಳಲ್ಲಿ ಮಧ್ಯಮ ವರ್ಗದಲ್ಲಿ ಹುಟ್ಟಿದ ಹೆಣ್ಣು ಕಂತಿನ ರೂಪದಲ್ಲಿ ವಸ್ತುಗಳಿಗೆ ಹಣ ಕಟ್ಟಿ ಸಂಸಾರದೊಂದಿಗೆ ಹೆಣಗಾಡುವ ಪರಿಸ್ಥಿತಿ ಒಂದೆಡೆಯಾದರೆ , ಪ್ರತಿ ತಿಂಗಳೂ ಹೆಣ್ಣು ಪಡುವ ಯಾತನೆಗೆ ಏನು ಮಾಡಬೇಕು ಎಂದು ಪ್ರಶ್ನಾರ್ಥಕವಾಗಿ ಕೇಳುತ್ತಾರೆ. ಪ್ರತಿಭಾರವರ ಎಲ್ಲಾ ಕವಿತೆಗಳಲ್ಲೂ ಕಂಡು ಬರುತ್ತದೆ.

**ಬಿ.ಟಿ. ಲಲಿತಾ ನಾಯಕ್**

ಸಮಾಜ ಸೇವಕಿ, ಸಂಘಟನಾ ಚತುರೆ, ಪತ್ರಿಕೆಯ ವರದಿಗಾರ್ತಿ, ರಾಜಕಾರಣಿ ಮತ್ತು ಸಾಹಿತಿಯಾಗಿ ತಮ್ಮನ್ನು ತಾವು ಕ್ರಿಯಾ ಶೀಲರಾಗಿ ತೊಡಗಿಸಿಕೊಂಡವರು ಲಲಿತಾರವರು. ಶ್ರೀಮತಿ ಲಲಿತಾನಾಯಕ್ ಅವರದು ಅಭಿಜಾತ ಪ್ರತಿಭೆ ಅದು ಪರಿಸರ ಸಂವೇದಿಯಾಗಿದೆ. ವಾಸ್ತವಿಕತೆಯ ಅಡಿಪಾಯದ ಮೇಲೆ ಅದು ಕಡೆದು ನಿಲ್ಲಿಸಿರುವ ಕೆಲವು ಚಿತ್ರಗಳು ನಮ್ಮ ಸಾಮಾಜಿಕ , ರಾಜಕೀಯ ಸ್ಥಿತಿಗತಿಗೆ ಕನ್ನಡಿ ಹಿಡಿಯುತ್ತಾ ಶೋಷಿತ, ದಲಿತವರ್ಗದ ದನಿಯಾಗುತ್ತಾ ಬಂದಿರುವುದು ರೋಚಕವಾದುದು.

ಗ್ರಾಮೀಣ ಸಮುದಾಯವೊಂದರ ಅವಕಾಶ ವಂಚಿತ ದಲಿತ ಪರಿಸರದಿಂದ ಹೊಮ್ಮಿರುವ ಲಲಿತಾ ತನ್ನ ಸುತ್ತಲಿನ ವಿದ್ಯಾಮಾನಗಳನ್ನು ಸೂಕ್ಷ್ಮವಾಗಿ ಗಮನಿಸುವ ಅವುಗಳಿಗೆ ಸಂವೇದನಾ ಪೂರ್ಣವಾಗಿ ಸ್ಪಂದಿಸುವ ಬಗೆ ಮೆಚ್ಚುವಂತದ್ದು.

ಅವರನಂ ರೂಪ್ಲಿ (1983) ಇದೇ ಕೂಗು ಮತ್ತೆ ಮತ್ತೆ (1986) ಒಡಲಬೇಗೆ(1996) ಸವಾಸೇರು (2005) ಮುಂತಾದ ಕವನ ಸಂಕಲನಗಳು ಪ್ರಕಟವಾಗಿವೆ.

ಒಡಲಬೇಗೆ- ಕವನ ಸಂಕಲನದಲ್ಲಿ ಅವ್ವನಿಗೆ ಅವಕಾಶ, ಬದುಕು ಸಿಟಿ ಬಸ್ಸು, ನೆನಪುಗಳು ಸಮಾಧಿ ಹೊಂದುತ್ತವೆ. ಮುಂತಾದ ಕವನಗಳು ಪ್ರಮುಖವಾದವು.

'ಅವ್ವನಿಗೆ ಅವಕಾಶ'ಕವಿತೆಯಲ್ಲಿ

ಹೆತ್ತವಳು ಅಷ್ಟೇ ಅವ್ವ

ಬರೆದವನು ಹಣೆ ಬರಹವ ಅಪ್ಪ

ಎಲ್ಲಾ ಅವ್ವಂದಿರಿಗೂ

ಅವರಪ್ಪ ಅಜ್ಜರದೇ ಬರಹ

ಎಂಬಲ್ಲಿ ಸ್ತ್ರೀ ದಾಸ್ಯವನ್ನೇ ಎತ್ತಾಡುತ್ತದೆ. ಒಂಭತ್ತು ತಿಂಗಳು ಹೊತ್ತು, ಹೆತ್ತು ಅವ್ವ ಹೆಣ್ಣನ್ನು ಸಾಕುತ್ತಾಳೆ ಆದರೆ ಆ ಮಗುವಿನ ಭವಿಷ್ಯವನ್ನು ಬರೆಯುವ ಅವಕಾಶ ಅಮ್ಮನಿಗಿಲ್ಲ. ತಲೆಮಾರುಗಳಿಂದಲೂ ಪುರುಷ ಮೌಲ್ಯದ ಪರಂಪರೆ ನಮ್ಮನ್ನು ಹಿಡಿದಿಡುತ್ತಾ ಬಂದಿದೆ ಎಂಬುದನ್ನು ತಿಳಿಸುತ್ತದೆ.

`ಬೆವರು ಹನಿದಾಗ'ಕವಿತೆಯಲ್ಲಿ

ನನ್ನ ಜನರ ಮೈ ಬೆವರು

ತಟ ತಟನೆ ಹನಿದಾಗ

ಬೆಟ್ಟಕ್ಕೆ ಬಂತೋ ಯೌವ್ವನ

ಮಗ್ಗಿನಲಿ ಜೀವ ಮಾಡಿ

ನೀಲಿ ಹಳದಿರಂಗು ಚೆಲ್ಲಿ

ಕಟ್ಟಿತೋ ಹಸಿರು ತೋರಣ

ನನ್ನ ಜನರ ಮೈ ಬೆವರು

ಹನಿಯಾಗಿ ಹರಿದಾಗ

ಭೂಮಿಗೇ ಬಂತೋ ಯೌವನ

ಉಡಿಯ ತುಂಬಾ ತೆನೆಯ ಸರ

ಮುಡಿಯೊಳಗೆ ಮೊಲ್ಲೆ ಮಾಲೆ

ಮೊಗ್ಗು ಮಿಡಿ ಸಂತೆ ನೆರೆದವೋ

ಮುಗಿಲ ಚುಕ್ಕೆ ಮದದಿಂದ

ನೆಲಕೆ ಇಳಿದವೋ

ಅಕ್ಷರ ವಂಚಿತ ಸಮುದಾಯ ಮುಂದೆ ಬೆಳಕನ್ನು ಕಾಣುವ ಕಾಲ ಬಂದಾಗ , ಅವರು ಸುರಿಸುವ ಬೆವರಿನ ಹನಿಗಳು ಮಣ್ಣಿನಲ್ಲಿ ಜೀವಕಳೆ ತಂದು ಹಸಿರಿನಿಂದ ಕೂಡಿದ ಬೆಟ್ಟಕ್ಕೆ ಯೌವನ ಬಂದಂತೆ ಎಂಬ ಸಾಲುಗಳು ದಮನಿತ ಸಮುದಾಯ ತನ್ನ ನೈತಿಕತೆಯನ್ನು ಸ್ಥಾಪಿಸಿದಾಗ ಆಗುವ ಮಾರ್ಪಾಡುಗಳು ಇದರಲ್ಲಿವ್ಯಕ್ತವಾಗಿದೆ.

ಅಕ್ಕ ಇನ್ನೂ ಸಿಕ್ಕಿಲ್ಲ ಮತ್ತು ಮೂದಲಿಸಿದವಳಾ ಕೃಷ್ಣೆ ಎಂಬ ಕವಿತೆಗಳಲ್ಲಿ ಮುಕ್ತಿಯ ಮಾರ್ಗ ಹುಡುಕಿಕೊಂಡು ಹೊರಟ ಅಕ್ಕ ಪುರುಷನಿಂದಲೇ ಮುಕ್ತಿ ಹೊಂದಿದ ಬಗೆ ಆದರ್ಶವಾದರೆ, ಮಂತ್ರ ಜಪದ ಮಾತ್ರದಿಂದಲೇ ಹೆಣ್ಣಿಗೆ ಬಂದ ಅಪವಾದಗಳು ಯಾವ ರೀತಿ ಜೀವ ತಳೆಯುತ್ತದೆ. ಎಂಬುದನ್ನು ತಿಳಿಸುತ್ತದೆ.

<u>ಇದೇ ಕೂಗು ಮತ್ತೆ, ಮತ್ತೆ ಕವನ ಸಂಕಲದಲ್ಲಿ</u>

ಬೋರ ಕಂಡ ದುಃಸ್ವಪ್ನ ಒಂದೇ ಒಂದು ಬಾರಿ ಹೊರಬನ್ನಿ, ದುಡಿವ ಕರುಳಿನ ಕೂಗು, ಅವತಾರ ಪುರುಷನಿಗೊಂದು ಕಿವಿಮಾತು ಮುಂತಾದವು.

ಮತೀಯರಾಗಿ, ಜಾತಿ ವಾದಿಗಳಾಗಿ ಇರುವುದರಿಂದ ಯಾವ ಪ್ರಯೋಜನವಿಲ್ಲ ಮಾನವಕುಲಂ, ತಾನೊಂದೆ ವಲಂ'ಎಂಬ ಸಂದೇಶವನ್ನು

'ಒಂದೇ ಒಂದು ಬಾರಿ ಹೊರಬನ್ನಿ' ಕವನ ಧ್ವನಿಸುತ್ತದೆ.

ಒಂದೇ ಒಂದು ಬಾರಿ ಹೊರಬನ್ನಿ

ನೀವಾಗಿ

ತೊಡಿಕೊಂಡಿರುವ ಹೋಡ ದೊಗರುಗಳ

ಮುಚ್ಚಿ

ಕಟ್ಟಿಕೊಂಡಿರುವ ಗೋಡೆ ಗೋಪುರಗಳ

ಕೆಡವಿ

ಒಂದೇ ಒಂದು ಬಾರಿ ಹೊರ ಬರುವಿರಾದರೆ

ಮಠ, ಮಂದಿರ ಚರ್ಚು ಮಸೀದಿಯ

ಬಾಗಿಲುಗಳು ನಮ್ಮ ನಿಮ್ಮ ಒಲೆಗೆ ಸೌದೆಗಳಾಗುತ್ತವೆ.

ಜಾತಿ ನೀತಿಯ ಕಲ್ಪನೆಗಳು ನಮಗೆ ನಾವೇ ತೋಡಿಕೊಂಡ ಸಮಾಧಿಗಳು, ಅವುಗಳನ್ನು ಬಿಟ್ಟು ಬಂದಾಗ ಮಾತ್ರ ಮಾನವೀಯತೆ ತನ್ನ ಮೌಲ್ಯವನ್ನು ಪಡೆಯುತ್ತವೆ.

ಕುವೆಂಪು ಹೇಳುವಂತೆ - ಗುಡಿ ಚರ್ಚು ಮಸೀದಿಗಳ ಬಿಟ್ಟು ಹೊರಬನ್ನಿ ಎಂಬ ಮಾತುಗಳನ್ನು ಮತ್ತೆ ಮತ್ತೆ ಧ್ವನಿಸುತ್ತದೆ.

ದಲಿತ ಸಮುದಾಯದಿಂದ ಬಂದರೂ ತನ್ನ ಪರಿಸರವನ್ನು ತಾನೇ ಮಾರ್ಪಡಿಸಿಕೊಂಡು ಸಾಹಿತ್ಯ ವಲಯದಲ್ಲಿ ಮಾತ್ರವಲ್ಲದೆ, ಸಾಹಿತ್ಯೇತರ ವಲಯದಲ್ಲೂಗುರ್ತಿಸಿಕೊಂಡು ಚಿಂತನ ಶೀಲ ಮನಸ್ಸುಗಳಿಗೆ ಕ್ರಿಯಾ ಶೀಲರಾಗಿರುವ ಲೇಖಕಿ ಬಿ.ಟಿ. ಲಲಿತಾ ನಾಯಕ್‌ರವರು ಸಾಮಾಜಿಕ ಕಳಕಳಿಯೊಂದಿಗೆ ಸಾಹಿತ್ಯದ ಮುಖೇನ ಜೀವಂತಿಕೆ ಒದಗಿಸುವ ಉದಯೋನ್ಮುಕ ಲೇಖಕಿ , ಚಿಂತಕಿ ಲಲಿತಾನಾಯಕ್ ಎನ್ನಬಹುದು.

**ಹೇಮಾ ಪಟ್ಟಣ ಶೆಟ್ಟಿ**

ಸುಮಾರು 100 ಕವನಗಳನ್ನು ಪ್ರಕಟಿಸಿರುವ ಹೇಮಾ ಅವರು ಮುಖ್ಯರಾಗುವುದು ಹೆಣ್ಣಿನ ಜೈವಿಕ ಅನನ್ಯತೆ ಮತ್ತು ಅವಳ ಶೋಷಿತ ಸಾಮಾಜಿಕ ನೆಲೆಗಳ ನಡುವೆ ಅವರು ಸಾಧಿಸುವ ಸಂಯೋಜನೆಯಿಂದ. ಅಷ್ಟೇ ಮುಖ್ಯವಾಗಿ ಶಬ್ದದ ಧ್ವನಿ ನೆಲೆಗಳ ಜಾಡು ಹಿಡಿದು ಅರ್ಥದ ಸರಣಿಯನ್ನು ಹುಟ್ಟಿಸುವ ಗುಣದಲ್ಲಿ ಪದ ಸಂಯೋಜನೆಗಳ ಮೂಲಕವೇ ಕವಿತೆಯನ್ನು ಒಡ ಮೂಡಿಸುವ ಕೆಲಸದಲ್ಲಿ, ಶೋಷಿತರಾದ- ದಲಿತರಲ್ಲಿದಲಿತರಾದ ಹೆಣ್ಣು ಮಕ್ಕಳ ಕವಿತೆಯು ಪ್ರತಿಭಟನೆಯ ಸಾಮಾನ್ಯ ಚೌಕಟ್ಟನ್ನು ಮೀರುವ ಮೂಲಕವೇ ಆರೋಗ್ಯವನ್ನು ಕಾಪಾಡಿಕೊಂಡಿದೆ.

ಹೊಸ ಹಾಡು (1986) ವಿರಹೋತ್ಸವ (1983) ಕಣ್ಣುಗಳಲ್ಲಿ ಕನಸ ತುಂಬಿ (1993) ಮುಂತಾದವುಗಳ ಕವನ ಸಂಕಲನಗಳಾಗಿವೆ.

ವಿರಹೋತ್ಸವ ಸಂಕಲನದಲ್ಲಿ ನಾಗರತ್ನ, ದೀಪದ ಕತ್ತಲೆ, ಧೃತಿ. ಪಂಚಸೂತ್ರ, ಸಂಕಲ್ಪ, ಗಂಡನೊಳಗಿನ ಗಂಡು ಮುಂತಾದ ಕವಿತೆಗಳು ಕಂಡು ಬರುತ್ತವೆ.

ಹೆಣ್ಣನ್ನು ಕೇಂದ್ರದಲ್ಲಿಟ್ಟು ಸ್ಥಾಯಿಯಾಗುವ ವಿರಹದಲ್ಲಿ ಬೆರಗು, ನೋವುಗಳ, ಹಳ ಹಳಿಕೆ, ಕ್ಷಣದ ತೃಪ್ತಿ, ನಿರ್ವೇಗಗಳು ಸದಾ ಸಂಚಾರ ಸ್ಥಿತಿಯಲ್ಲಿದ್ದರೂ ಸಂಯಮ, ಸೂಕ್ಷ್ಮತೆ ಮುಂತಾದವು ಅರಳಿವೆ.

**ಕಣ್ಣುಗಳು ಕನಸು ತುಂಬಿ :** ಸಂಕಲನದಲ್ಲಿ ಮುಖಾಮುಖಿ, ಬೇಕು ಮುಳ್ಳುಗಳು ಹೂವುಗಳು ಕನಸು ಸಾಯುವುದಿಲ್ಲ ಕವನಗಳು ಪ್ರಮುಖವಾಗಿವೆ.

ಈ ಸಂಕಲನದ ಒಟ್ಟಾರೆ ಅಂಶದ ಧ್ವನಿ ಆಶಾವಾದಿತನ ಜೀವನೋತ್ಸವ , ಊರ್ಧ್ವಮುಖೀ ಚಿಂತನೆ, ಕೌಟುಂಬಿಕ ಪ್ರೀತಿ ಮಾರ್ಧವತೆಗಳು ಇದರ ಶಕ್ತಿ ಧ್ವನಿಸುತ್ತವೆ. ಕನಸು, ಎಚ್ಚರಗಳು ವ್ಯಷ್ಠಿ ಮತ್ತು ಸಮಷ್ಠಿಗಳ ನಡುವೆ ಸಮತೋಲನವನ್ನು ಕಾಯ್ದುಕೊಂಡಿವೆ ಎನ್ನಬಹುದು.

ಹೇಮಾ ಮತ್ತು ಅವರ ಇತರ ಹಲವು ಕವಿಯತ್ರಿಯರಲ್ಲಿ ಸ್ವ ವಿಮರ್ಶೆ ಎಲ್ಲೆಗಳನ್ನು ಮೀರಿಯೂ ಸಾರ್ವತ್ರಿಕವಾದ ಮನ್ನಣೆಯನ್ನು ಪಡೆಯುವುದರಲ್ಲಿ ಈ ಕವಿತೆಗಳು ಯಶಸ್ವಿಯಾಗಿವೆ. ಸ್ತ್ರೀವಾದಿ ವೈಚಾರಿಕತೆ ಮತ್ತು ಅಂಥದೊಂದು ಬಂಧನಕ್ಕೆ ಸಿಲುಕಬಯಸದ ನಿಜವಾದ ಕಲಾವಿದೆಯೊಬ್ಬಳ ಸರ್ವಗ್ರಾಹಿ ಪ್ರಾಮಾಣಿಕತೆಗಳ ನಡುವಿನ ತಾಕಲಾಟದಿಂದ ಮೂಡುತ್ತದೆ . ಹೆಣ್ಣು ಮಕ್ಕಳಿರಲಿ ದಲಿತರಿರಲಿ ತರ್ಕ ಪ್ರಧಾನವಾದ ವಿಚಾರ ಪ್ರಣಾಳಿಗಿರುವ ಬದ್ಧತೆಯ ಅದು ಹೇಗೋ ಅನುಭವದ ಹಲವು ಮಗ್ಗುಲುಗಳನ್ನು ಕತ್ತರಿಸಿ ಕವಿತೆಗೆ ಸಹಜವಲ್ಲದ ಒಂದು ದಾರಿ ನಡಿಗೆಗೆ ಎಡೆ ಮಾಡಿಕೊಟ್ಟಿದೆ. ಹೇಮಾ ಅವರು ಹೆಣ್ಣಿನ ವಿಚಾರದ ಎಲ್ಲಾ ನೆಲೆಗಳನ್ನು ತೀವ್ರವಾಗಿ ತಿಳಿದಿರುವಾಗಲೂ ಕಟ್ಟಿಕೊಡುವಾಗಲೂ ವಕೀಲಿ ವೃತ್ತಿಯ ಕಟ್ಟುಪಾಡುಗಳಿಗೆ ಸಿಲುಕುವುದಿಲ್ಲ. ಒಟ್ಟಾರೆಯಾಗಿ ಸ್ತ್ರೀವಾದಿ ಎಚ್ಚರ, ಪ್ರಚಾರ ಹಾಗೂ ಕವಿತೆಗಳ ನಡುವ ಅವರ ಆಯ್ಕೆ ಕವಿತೇಯೇ ಆಗಿ ಉಳಿದಿರುವುದು ಗಮನಾರ್ಹ ಸಂಗತಿ.

**ವಿರಹೋತ್ಸವದ 'ತಿರುಗಣೆ' ಕವಿತೆಯಲ್ಲಿ**

ನನ್ನ ಬಳಸುತ್ತಿರುವ ನನ್ನ ಬಳಗದಲಿರುವ
ನನ್ನ ಸಖಿಯರ ಕಥೆ
ಬರಿಯ ಹೇಳಿಕೆಯಲ್ಲ
ಮಾತಿನುಗ್ರಾಣಗಳು, ಚಿಮ್ಮಿದುಮ್ಮಳವಲ್ಲ
ನಿತ್ಯ ವ್ಯಾಪಿಸಿ ನನ್ನ ಚಿಗುರುತ್ತಿರುವ
ನವಿರು ಲಯಗಳ ಹಗುರ ವ್ಯಥೆ
ನನ್ನ ಬಳಸುತ್ತಿರುವ ಗೆಳತಿಯರ ಕಥೆ

ಬರಿಯ ಹೇಳಿಕೆಯಲ್ಲ ಕನವರಿಕೆ

ನನ್ನದೇ ಮನವರಿಕೆ ಎಂದು ಹೇಳುವುದು ಹೇಗೆ?

ನೀ ಹೇಳು

ಹೆಣ್ಣಿನ ಸಹಜ ಜೈವಿಕ ಕ್ರಿಯೆಗಳ ನಡುವೆ ಮನಸ್ಸುಗಳ ತಾಕಲಾಟವನ್ನು ಸ್ವಂತಿಕೆ ಮತ್ತು ಗೆಳತಿಯರೊಡನೆ ಬಿಚ್ಚಿಡುತ್ತಾ ಹೋಗುವ ಕ್ರಿಯೆ ಕಂಡು ಬರುತ್ತದೆ.

'ಸರೋವರೆ ಕವಿತೆಯಲ್ಲಿ

ಈ ಸರೋವರದಲ್ಲಿ ಮಿಂದು

ಹೋದವರು ಯಾತ್ರಿಕರು

ಮಾಂತ್ರಿಕರು ಭಾವಿಕರು ನಾವಿಕರು

ಊರು ನಗರಗಳಾಚೆ ಕಾಡ ಮಧ್ಯದಿನೆಲೆಸಿ

ಏಕಾಂತ ಸಖಿರಿಗೊಂದರ ಮನೆಯೆ ಆಗಿ

ಮೆರೆವ ಈ ಕೊಳದಲ್ಲಿ

ನೊಂದ ದುರ್ಯೋಧನರು

ಕೊಂದ ಭೀಮಾದಿಗಳು

ಬಂದ ಬಾಂಧವರು ನಿಂದ ನಂದನರು

ಎಲ್ಲರಿಗೂ ಅಮೃತಜಲ ಹೆಣ್ಣು

ಬಂದವರ ನೋಲೈಸಿ ನೊಂದವರ ಸಂತೈಸಿ

ಮತ್ತೆ ಹೊಸ ನೋವುಗಳ ಸಹಿಪ ಶಕ್ತಿಯ ನೀಡಿ

ಮುನ್ನಡೆಸಿ ಅವರವರ ಮುಖ

ತೊಳೆದು ತೋರಿಸಿ ಅವರವರಿಗೇನೇ

ಕಾಡ ಮಧ್ಯದಿ

ಊರು ನಗರಗಳಾಚೆ ದೂರದೀ

ದರ್ಪಣ ಸರೋವರ ನಾನೆ.

ಹೆಣ್ಣಾದವಳ ವ್ಯಥೆ, ಅವಳೊಂದಿಗೆ ಸುಖವನ್ನರಸಿಕೊಂಡು ಹೋದವರ ಸಂಬಂಧಗಳು ಸರೋವರವಾಗಿ, ಅವರಿಗೇ ಅವರ ಬದುಕಿನ ಕನ್ನಡಿಯಾಗಿ ಹೆಣ್ಣು ಮಾರ್ಪಟ್ಟಿರುವ ಕ್ರಿಯೆ ತಿಳಿಸುತ್ತದೆ.

'ಆಯ ಮತ್ತು ಹೊಸ ಹಾಡು ' ಕವನದಲ್ಲಿ

ಹೆಣ್ಣಿನ ಬದುಕು ಕನಸಿನೊಂದಿಗಿನ ವಿಲೀನತೆಯಲ್ಲ, ವಾಸ್ತವದ ತುಡಿತದೊಂದಿಗೆ ನಿಜ ಬದುಕಿನ ಚಿತ್ರಣ ಬಹಳ ಮುಖ್ಯ.ಹೆಣ್ಣು ಮತ್ತುದಲಿತರ ನಡುವಿನ ಸಾಮರಸ್ಯವನ್ನು ಉಳ್ಳವರು ಯಾವ ರೀತಿ ಸ್ಪಂದಿಸುತ್ತಾ ಹೋಗುತ್ತಾರೆ. ಎಂಬುದು ಈ ಕವಿತೆಗಳಲ್ಲಿ ಮುಖ್ಯವಾಗಿ ಕಂಡು ಬರುತ್ತದೆ.

ಮನಸ್ಸಿನಿಂದ ಮರೆಯಾದ ವೃತ್ತಾಂತಗಳು ಮತ್ತೆ ನೆನಪಾಗಿ ಕಾಡಿದಾಗ ಎದುರಾಗುವ ತಾಕಲಾಟಕ್ಕೆ ಉತ್ತರ ಸಿಗದೆ ಹೋದಾಗ ನಿಟ್ಟುಸುರಿನೊಂದಿಗೆ , ನಿಶ್ಚಿತ ನಗೆ ಜೊತೆಗೂಡುವುದರೊಂದಿಗೆ ಎಚ್ಚರಿಕೆಯೊಂದಿಗೇ ಉದ್ವೇಗ ಮತ್ತು ನಿರ್ಲಿಪ್ತತೆ ಜೊತೆಗೂಡುವ ಕ್ರಿಯೆ ಹೇಮಾ ಅವರ ಎಲ್ಲಾಕವಿತೆಗಳಲ್ಲೂ ಕಂಡು ಬರುತ್ತದೆ. ಭಾಷೆಯ ಪ್ರೌಢಿಮೆಯ ಜೊತೆಗೆ ಜೀವನದ ಅನನ್ಯ ಅನುಭವ ಮತ್ತು ಸಂಸಾರದೊಂದಿಗೆ ತನ್ನ ವಿಭಿನ್ನ ಬರವಣಿಗೆಯನ್ನು ಮೈಗೂಡಿಸಿಕೊಂಡು ಕಾವ್ಯ ಪ್ರಪಂಚದಲ್ಲಿ ಇಂದಿಗೂ ಪ್ರಸ್ತುತರಾಗೇ ಇರುವ ಲೇಖಕಿ ಹೇಮಾ ಎನ್ನಬಹುದು.

**ಡಾ.ಕೆ. ಆರ್. ಸಂಧ್ಯಾರೆಡ್ಡಿ**

ಸ್ತ್ರೀ ಸಂವೇದನೆಯನ್ನು ಕವಿತೆಗಳ ಮೂಲಕ ವ್ಯಕ್ತ ಪಡಿಸುತ್ತಾ ಕಾವ್ಯ ಲೋಕಕ್ಕೆ ತೆರೆದುಕೊಳ್ಳುವ ಲೇಖಕಿ ಸಂಧ್ಯಾರವರು . ಕಾವ್ಯ ಕ್ಷೇತ್ರದಲ್ಲಿ ಗಂಭೀರವಾಗಿ ತೊಡಗಿಸಿಕೊಳ್ಳುತ್ತಾ, ವಯಕ್ತಿಕ ನೆಲೆಯಲ್ಲಿರುವ ತಮ್ಮ ಅನುಭವಗಳಿಗೆ ಕಾವ್ಯದ ರೂಪ ಕೊಡುವ ಪ್ರಯತ್ನ ಅವರ ಎಲ್ಲಾ ಕವಿತೆಗಳಲ್ಲೂ ಮೂಡಿ ಬಂದಿದೆ. ಪ್ರಸ್ತುತ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರಾಗಿ ಸಾಹಿತ್ಯಿಕ ಕ್ಷೇತ್ರದೊಂದಿಗೆ ಸದಾ ಒಡನಾಡಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಮೊದಲಕವನ ಸಂಕಲನ 'ಮೂವತ್ತೈದರ ಹೊಸ್ತಿಲು' (1990) ರಲ್ಲ ಪ್ರಕಟವಾಯಿತು.

ಗಂಭೀರ ಜಾನಪದ ವಿದ್ವಾಂಸರಾದರೂ ಕಾವ್ಯ ಮಾಧ್ಯಮವನ್ನು ಸ್ತ್ರೀ ಸಂವೇದನೆಯನ್ನು ಸೂಕ್ಷ್ಮ ಮನಸ್ಥಿತಿಯೊಂದಿಗೆ ಕಟ್ಟಿಕೊಡುತ್ತಾರೆ.

ಮೂವತ್ತೈದರ ಹೊಸ್ತಿಲು ಕವನ ಸಂಕಲನದಲ್ಲಿ ಬರುವ ಎಲ್ಲಾಕವನಗಳು ಪ್ರಿತಿಯನ್ನೊಳಗೊಂಡರೂ ಬದುಕಿನ ಅರ್ಥಪೂರ್ಣತೆಯನ್ನು ಧ್ವನಿಸುತ್ತದೆ. ಮೂವತ್ತೈದರ ಹೊಸ್ತಿಲು , ತೋಳಗಳು, ಬದುಕು, ಪ್ರೇಮಿಸುವುದೇನೆಂದರೆ ಮುಂತಾದ ಕವಿತೆಗಳು ಪ್ರಮುಖವಾಗಿ ಕಂಡು ಬರುತ್ತವೆ.

**'ಈ ಪ್ರೀತಿಯೊಳಗೆ'**- ಕವನ ಸಂಕಲನ(1996) ಪ್ರಕಟವಾಯಿತು.

ಪ್ರೀತಿಯೊಂದಿಗೆ, ಸ್ತ್ರೀ ಸಂವೇದನೆಗಳನ್ನು ಮನುಷ್ಯನ ಸಂವೇದನೆಗಳೊಂದಿಗೆ ಪ್ರತಿನಿಧಿಸುತ್ತಾ, ಕವಿತೆಗಳ ಮೂಲಕ ಸಂವೇದಿಸುವ ಕ್ರಮ ಬಹಳ ಮುಖ್ಯವಾಗಿ ಕಂಡು ಬರುತ್ತದೆ.

ಮಧ್ಯಮವರ್ಗದ ಹೆಣ್ಣು ತನ್ನ ಯೌವನದ ನಂತರ ತುಮುಲಗಳ ತೀವ್ರತೆಗೆ ಒಳಗಾಗಿ ಧ್ವನಿಸುವ ಬಯಕೆಗಳು ಮತ್ತು ದ್ವಂದ್ವಗಳು ಇವರ ಕಾವ್ಯದ ಮುಖ್ಯವಸ್ತುವಾದರೂ ಸರಳತೆಯೊಂದಿಗೇ ಮೌನದೊಂದಿಗಿನ ಮಾತು ಅವರ ಎಲ್ಲಾ ಬರವಣಿಗೆಗಳನ್ನೂ ಧ್ವನಿಸುವುದನ್ನು ನೋಡಬಹುದು. ಬಹುತೇಕ ಎಲ್ಲಾ ಮಹಿಳಾ ಕವಿತೆಗಳಲ್ಲೂ ಸ್ವಗತದ ಮಾದರಿ ಬಹಳ ಮುಖ್ಯವಾಗಿ ಕಂಡು ಬರುತ್ತದೆ. ಈ ಒಂದು ಸ್ವಗತದ ಕಲ್ಪನೆ ಹುಟ್ಟಿಕೊಂಡಿದ್ದೇ ಜನಪದ ಸಾಹಿತ್ಯದಿಂದ ಎನ್ನಬಹುದು. ಈ ಒಂದು ಮಾದರಿಯ ನಿರೂಪಣೆ ಸಂಧ್ಯಾರವರ ಬರವಣಿಗೆಯಲ್ಲೂ ನೋಡಬಹುದಾಗಿದೆ.

ಈ ಸಂಕಲನದಲ್ಲಿ ಓ ನನ್ನ ಚೇತನ , ಈ ಪ್ರೀತಿಯೊಳಗೆ , ಗಂಡ ಪ್ರಿಯತಮನಲ್ಲ, ಬಿರುಕು ಮಧ್ಯಮವರ್ಗ ಮುಂತಾದ ಕವಿತೆಗಳು ಪ್ರಮುಖವಾದುವಾಗಿವೆ.

'ಬದುಕು' - ಕವಿತೆಯಲ್ಲಿ

ಬದುಕಿನಲ್ಲಿ ಎಲ್ಲಾದಿನಗಳೂ
ಇರುವುದಿಲ್ಲ ಒಂದೇ ರೀತಿ
ಕೆಲವು ದಿನಗಳು
ಈಗಿನ ಕಾಲೇಜು ಹುಡುಗಿಯರ ಹಾಗೆ
ಹೆಚ್ಚು ಅರ್ಥವಿಲ್ಲದಿದ್ದರೂ ಸುಂದರ
ಕೆಲವು ದಿನಗಳು

ಮೂವತ್ತೈದರ ಹೊಸ್ತಿಲಲ್ಲಿ ಬದುಕಿನಲ್ಲಿನ ಏರಿಳಿತ, ಸಂಸಾರದ ಜಂಜಾಟಗಳು ಕಾಡುವ ಕ್ರಿಯೆ ಇಲ್ಲಿ ಸಾಮಾನ್ಯವಾದುದಾಗಿದೆ. ಕಳೆದ ಬದುಕು, ಇರುವ ಬದುಕು ಮತ್ತು ಉಳಿಯುವ ಬದುಕಿನ ಸಂಘರ್ಷ 'ಕೆಲವು ದಿನಗಳು' ಎಂಬ ವಾಕ್ಯದಲ್ಲೇ ವಿಭಿನ್ನ ಮತ್ತು ವಿಶಾಲಾರ್ಥವನ್ನು ಪಡೆದು ಕೊಂಡಿವೆ.

**ತೋಳಗಳು ಕವಿತೆಯಲ್ಲಿ**

ಜಾನಪದ ದಾಟಿಯ ಶೈಲಿಯಲ್ಲಿ ಹುಟ್ಟಿಕೊಂಡ ಈ ಕವನ ಹೆಣ್ಣಿನ ಜನನವೆಂಬುದು ಯಾವ ಸ್ಥಾನ ಪಡೆದುಕೊಂಡಿದೆ ಎಂಬುದನ್ನು ತಿಳಿಸುತ್ತದೆ.

ಇದೊಂದು ಜನಪದ ಕಥೆ,

ಕುಂಬಾರ ಕುಂಬಾರ್ತಿ ಮಣ್ಣು ತರಲು

ಹೋದರಂತೆ

ಕುಂಬಾರ್ತಿ ಅಲ್ಲೆ ಹೆಣ್ಣು ಶಿಶು ಹಡೆದಳಂತೆ

ಮಡಿಲೊಳಗೆ ಕಟ್ಟಿಕೊಂಡಳಂತೆ

ಒಂದು ಹಿಡಿ ಮಣ್ಣಾದರೂ ಆದಿತೂ

ಕುಂಬಾರನೆಂದನಂತೆ

ಮಡಿಲಲ್ಲಿ ಮಣ್ಣು ತುಂಬಿ ಸೆರಗಲ್ಲಿ

ಮಗು ಕಟ್ಟಿಕೊಂಡಳಂತೆ

ಸೆರಗಲ್ಲೂ ಹಿಡಿ ಮಣ್ಣು ಕಟ್ಟಿಕೋ

ನೀರಿಗೆ ಕುಡಿಕೆಯಾದರೂ ಆದೀತು

ಎಂದನಂತೆ

ಎಳೆಯ ಕಂದಮ್ಮನನ್ನು ಬಿದಿರ ಮೆಳೆಗೆಸೆದು

ಸೆರಗಲ್ಲಿ ಮಣ್ಣು ಕಟ್ಟಿಕೊಂಡಳಂತೆ

ಹಸಿರು ಕಾಡಿನ ಮೌನದ ತುಂಬಾ

ಏಳು ತೋಳ ಬಂದವಂತೆ

ಮಗುವಿನಳುವಿಗೆ

ಎದೆಕರಗಿ

ಹೆಣ್ಣಾದರೆ ತಂಗಿ

ಗಂಡಾದರೆ ತಮ್ಮ

ಎಂದು ಮಗುವನ್ನು ಎದೆಗಪ್ಪಿ

ಸಾಕಿ ಬೆಳೆಸಿದುವಂತೆ

ಹಡೆದವಳಿಂದಲೇ ಮಗುವನ್ನು ಬಿದಿರು ಮೆಳೆಗೆ ಬಿಸಾಡಿಸುವ ರೀತಿ, ಮಣ್ಣಾದರೆ ಮಡಿಕೆ, ಕುಡಿಕೆಗೆ ಸಹಕಾರಿ, ಆದರೆ, ಹೆಣ್ಣಾದವಳು ಏತಕ್ಕೆ?ಎಂಬ ಪ್ರಶ್ನೆ ಕಾಡುತ್ತದೆ. ಮನುಷ್ಯತ್ವದಿಂಂದ ದೂರದ ಪುರಷ ವರ್ತನೆಗೂ, ಆಕ್ರಮಣಕಾರಿ ಪ್ರವೃತ್ತಿಯ ತೋಳಗಳ ಈ ಕವಿತೆಯಲ್ಲಿ ವಿರುದ್ಧವಾಗಿ ಕಂಡು

ಬಂದಿದೆ. ಈ ಕಾಲದಲ್ಲೂ ವಿದ್ಯಾವಂತ ಸಮುದಾಯಕ್ಕೂ ಹೆಣ್ಣು ಮಗುವಾದರೆ ಅದನ್ನು ನೋಡುವ ಕ್ರಮ ಹೇಗೆ? ಎಂಬ ಪ್ರಶ್ನೆ ಮೂಡುವುದು ಸಹಜವಾದುದಾಗಿದೆ.

ನೆನಪುಗಳ - ಕವಿತೆಯಲ್ಲಿ

ಕೆಲವು ನೆನಪುಗಳು

ಆಗಷ್ಟೇ ಮಳೆ ಬಿದ್ದ ನೆಲದಂತೆ

ತಂಪಾಗಿರುತ್ತವೆ. ಹಸಿಯಾಗಿರುತ್ತವೆ.

ಕೆಲವು ನೆನಪುಗಳು

ಸುಂಟರ ಗಾಳಿಯಾಗಿ

ತರಗೆಲೆಯಾಡಿಸುತ್ತವೆ.

ನೆನಪುಗಳು ಏನಾದರೂ ಆಗಬಹುದು

ಅವಕ್ಕೆ ಸಾವೆಂಬುದಿಲ್ಲ

ನೆನಪುಗಳು ಮನುಷ್ಯನೊಂದಿಗೆ ಸದಾ ಒಡನಾಡಿಯಾಗಿ ಬರುವಂತಹವು. ಬದುಕಿನ ಸಿಹಿ ಕಹಿಗಳ ಅನುಭವ ನೆನಪಾಗಿ ಹೇಗೆ ಮನುಷ್ಯನೊಂದಿಗೆ ನಿರಂತರವಾಗಿ ಕಾಡುತ್ತಾ ಒಡನಾಡಿಯಾಗಿ ಸಾವಿಲ್ಲದಂತೆ ಸದಾ ಜೀವಂತಿಕೆ ಪಡೆಯುತ್ತವೆ ಎಂಬುದನ್ನು ಈ ಸಾಲುಗಳು ತಿಳಿಸುತ್ತವೆ.

ರಾತ್ರಿಗಳು , ಒಂಟಿತನ, ನಲವತ್ತರ ನಂತರ, ಗಂಡ ಪ್ರಿಯತಮನಲ್ಲ , ಮುಂತಾದ ಕವಿತೆಗಳು ಪ್ರೀತಿ, ವಿರಹ, ಸಂಸಾರ ನೌಕೆಯಲ್ಲಿ ಬರುವ ದಾಂಪತ್ಯ ಮುಂತಾದವುಗಳನ್ನು ಚಿತ್ರಿಸುತ್ತಾ ಬದುಕಿನ ಪರಿಪೂರ್ಣತೆಯ ಜಾಡನ್ನು ತಿಳಿಸುತ್ತವೆ.

'ಓ ನನ್ನ ಚೇತನ ' ಕವಿತೆಯಲ್ಲಿ

ಮೂರು ಕಾಸಿನ ಜೋಪಾನಕ್ಕೆ

ಆರು ಕಾಸು ಖರ್ಚು ಮಾಡಿ ಕಟ್ಟಿದ ಮನೆ

ಹಾವಾಗಿ ಸುತ್ತಿ ಕೊಳ್ಳುವ ಸಂಬಂಧಗಳು

ಕೋಪದ ದಳ್ಳುರಿ

ಅಸಹಾಯಕತೆಯ ಮಿಡುಕು

ಅಷ್ಟಿಷ್ಟು ನಗೆ ಆವಿ ಹೊಗೆ

ಮನೆಯ ಹೊರಗೆ ರಾಶಿ ರಾಶಿ ನಕ್ಷತ್ರ

ನೋಡುವ ಆಸೆ

ಅಡುಗೆ ಮನೆ,ಊಟದ ಮನೆ

ಹಾಲು, ವರಾಂಡ , ಹೊಸ್ತಿಲುಗಳು

ಏಳು ಕಡಲು, ಏಳು ಬೆಟ್ಟ, ಏಳು ಕೋಟೆ

ಕಳೆದು ಬಿಡುವುದೆ, ಬದುಕು ಓದುವ ಮೊದಲೇ

ಗಾಳಿಗೆ ಮಗುಚಿದ ಪುಟದ ಹಾಗೆ

ಎಂಬ ಸಾಲುಗಳು ಕವನದಲ್ಲಿನ ಹಂಬಲ, ಹೃದಯ ಜನ್ಯ ಪ್ರೀತಿಯ ಮನುಷ್ಯ ಪರಿಧಿಯೊಳಗೆ ಉಳಿದುಕೊಳ್ಳುವ ಮೂರ್ತರೂಪದ್ದು, ಅಂತರ್ಮುಖಿಯಾದದ್ದು. ಅದು ಬುದ್ದಿ ಜನ್ಯ ಸಂಕಲ್ಪವಲ್ಲ. ಬದಲು ಮಣ್ಣಿನಲ್ಲೇ ಬೇರು ಬಿಟ್ಟು ತಲೆ ಎತ್ತಿ ಚಿಗುರೊಡೆಯುತ್ತಿರುವ ಜೀವಂತ ಬಯಕೆ ಜೀವನ ಮುಖಿಯಾದದ್ದು, ಕೌಂಟುಂಬಿಕ ಒತ್ತಡಗಳಲಕ್ಷ್ಮಣ ರೇಖಯೋಳಗೆ , ಮನೆವಾರ್ತೆಗೆ ಸೀಮಿತಗೊಂಡು, ತನ್ನ ಜೀವನದ ಅರ್ಥ ಹಾಗೂ ಸ್ವಾರ್ಥಕ್ಕಾಗಿ ದುಡಿಯುತ್ತಿರುವ ಹೆಣ್ಣೊಂದರ ಬಿಡುಗಡೆಯ ದಾರಿ ಎಷ್ಟೊಂದು ಕಠಿಣ ಹಾಗೂ ತೊಡಕಿನದೆಂಬುದನ್ನು ಸರಳವೆನ್ನಬಹುದಾದ ಆದರೆ, ಗಾಢವಾದ ಅರ್ಥ ಆಯಾಮಗಳನ್ನು ಅಂತರ್ಗತವಾಗಿಸಿಕೊಂಡಿರುವ ಪ್ರತಿಮೆಗಳ ಮೂಲಕ ಅತ್ಯಂತ ಪರಿಣಾಮಕಾರಿಯಾಗಿ ಲೇಖಕಿ ಧ್ವನಿಸಿದ್ದಾರೆ.

ಬದುಕಿನ ಏರಿಳಿತಗಳು , ಸಂಸಾರ ಸಾಗಿಸುವಲ್ಲಿ ಹೆಣ್ಣಾದವಳು ಪಡುವ ಯಾತನೆ, ಪ್ರೀತಿಸಿದವನೊಂದಿಗೆ ಬದುಕು ನಡೆಸಲಾಗದೆ , ಗಂಡನೊಂದಿಗೆ ಬದುಕುವಾಗ ಬರುವ ನೆನಪುಗಳು ಹೇಗೆ ಬದುಕಿನೊಂದಿಗೆ ವಿಭಿನ್ನ ಮಗ್ಗುಲುಗಳಾಗಿ ಜೊತೆಯಾಗಿ ಬರುತ್ತವೆ. ಹಾಗೂ ವಯಕ್ತಿಕತೆ ಮಾತ್ರವಲ್ಲದೆ ಸಾರ್ವತ್ರಿಕತೆಯೆಡೆಗೆ ಎಲ್ಲರೊಂದಿಗೆ ತಮ್ಮ ಕವಿತೆಗಳ ಮೂಲಕ ಸಂಧ್ಯಾರವರು ಹತ್ತಿರವಾಗುತ್ತಾ ಬಂದಿದ್ದಾರೆ ಎಂಬುದ ಬಹು ಮುಖ್ಯವಾದುದಾಗಿದೆ.

**ಸವಿತಾ ನಾಗಭೂಷಣ್:**

ಇತ್ತೀಚಿನ ದಿನಗಳಲ್ಲಿ ಸಾಹಿತ್ಯಿಕವಾಗಿ ಬಹಳ ಪ್ರಚಲಿತದಲ್ಲಿರುವ ಹೆಸರು ಸವಿತಾ ನಾಗಭೂಷಣ್‌ರವರದು.

ನಾಬರುತ್ತೇನೆ ಕೇಳು (1987) ಚಂದ್ರನನ್ನು ಕರೆಯಿರಿ ಭೂಮಿಗೆ (1991) ಹೊಳೆಮಗಳು (1996) ಮುಂತಾದ ಕವನ ಸಂಕಲನಗಳಾಗಿವೆ.

ಇಂತರ, ನಾ ಬರುತ್ತೇನೆ ಕೇಳು ಕವನ ಸಂಕಲನಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಪ್ರಶಸ್ತಿ ದೊರೆತಿದೆ.

'ಹೊಳೆ ಮಗಳು' ಕವನ ಸಂಕಲನದಲ್ಲಿ ಪುಟ್ಟ ಕೆಂಚವ್ವ, ಕಾಲುದಾರಿಯೇ ಸಾಕು, ಮುಂಬತ್ತಿ, ಗಂಡು , ಬೀಜಯಜ್ಞ ಮುಂತಾದ ಕವಿತೆಗಳು ಕಂಡು ಬರುತ್ತವೆ.

'ಪುಟ್ಟ ಕೆಂಚವ್ವ' ಕವಿತೆಯಲ್ಲಿ ಹಳ್ಳಿ ಹೆಣ್ಣುಮಗಳು ಸಂಸಾರದ ಜವಾಬ್ದಾರಿಯನ್ನು ಹೊತ್ತು ಜೀವಿಸುವ ರೀತಿ, ಜವಾಬ್ದಾರಿಯಿಂದ ವಂಚಿತರಾದ ತಂದೆ ತಾಯಿಗಳು , ಪ್ರೀತಿಯಿಂದ ವಂಚಿತರಾದ ಮಕ್ಕಳು , ಜೀವನ ನಡೆಸುವ ರೀತಿ ಮುಖ್ಯವಾದದು. ಹೆಣ್ಣಾದವಳು ಎಲ್ಲವನ್ನು ಸಹಿಸಿ ಜೀವನಾಭೀಮುಖಕ್ಕೆ ತುಡಿಯುವ ಜೀವ ಎಂಬುದನ್ನು ಈ ಕವಿತೆ ವ್ಯಕ್ತಪಡಿಸುತ್ತದೆ.

ಅಪ್ಪನ ಕುಡಿತ - ಬ್ರಾಂದಿಗೆ ಬೆದರುವಳು
ಅವ್ವನ ದಮ್ಮು - ಗೂರಲಿಗೆ ನೋಯುವಳು
ಸಿಟ್ಟಿನಲಿ ಕಟ್ಟಿರುವೆ ಬೆಚ್ಚಿ ನೆಗೆಯುವಳು
ದಿಟ್ಟ ನಡೆಯುವಳು ನಮ್ಮ ಪುಟ್ಟ ಕೆಂಚವ್ವ
ಎರೆಮಣ್ಣ ಕಲಸಿ ಬೊಂಬೆಯ ಮಾಡುವಳು
ಬೊಂಬೆಗೂ ಜೀವ ಕೊಡುವಳು ನಮ್ಮ ಪುಟ್ಟ ಕೆಂಚವ್ವ

ಜೀವನದ ಅನನ್ಯ ಅನುಭವ ಮತ್ತು ಮಾನಸಿಕ ಸ್ಥೈರ್ಯದ ಗಟ್ಟಿತನ ಈ ಪುಟ್ಟಹುಡುಗಿಯಲ್ಲಿ ಕಂಡು ಬರುತ್ತದೆ. ಇಂದಿಗೂ ಗ್ರಾಮೀಣ ಬದುಕಿನಲ್ಲಿ ಈ ರೀತಿಯ ಉದಾಹರಣೆ ಸಾಮಾನ್ಯವಾಗಿದೆ. ಕಷ್ಟದಲ್ಲೂ ಬದುಕಿನ ತೀವ್ರ ಹಂಬಲ ಯಾವ ರೀತಿಯದು ಎಂಬುದು ಈ ಕವಿತೆ ಬಿಂಬಿಸುತ್ತದೆ.

'ಬೆರಳು' ಕವಿತೆಯಲ್ಲಿ

ಮಲ್ಲನ ಮುಗಿಸಿತು ಮಲ್ಲಿಗೆ ಮುಡಿಸಿತು
ಕೆನ್ನೆಯ ಸವರಿತು ಕಣ್ಣೀರ ಒರೆಸಿತು
ಕನಸನು ಹೆಣೆಯಿತು ಕವಿತೆಯ ಒರೆಯಿತು
ಬಿನ್ನಾಣ ಮಾಡಿತು ಪ್ರೇಮದ ಬೆರಳು.
ಕೆನ್ನೆಯ ಹಿಡಿಯಿತು ಮದ್ದನು ಸಿಡಿಸಿತು

ತಕ್ಕಡಿ ಹಿಡಿಯಿತು ತಿಜೋರಿ ತುಂಬಿತು

ಮುಕುಟವ ಕಸಿಯಿತು ಮರಳನು ಅಳೆಯಿತು

ಯೌವನ ದರಳನು ಹುರಿಯಿತು ಬೆರಳು

ಹೆಣ್ಣಿನ ಪ್ರೇಮ ಕರುಣೆ, ತ್ಯಾಗ ಮತ್ತು ಶೌರ್ಯದ ಗುಣಗಳು ಬೆರಳಿನ ರೂಪಕಗೊಂದಿಗೆ ಮುಡಿ ಬಂದಿದೆ

'ಬೀಜಯಜ್ಞ' ಕವಿತೆಯಲ್ಲಿ

ಇನ್ನು ನಾನೆಂದರೆ

ದುಃಖ ದುಃಸ್ವಪ್ನ

ಇನ್ನು ನಾನೆಂದರೆ

ಕೇಡು ಕಾರಿಣ್ಯ

ಚಂಡಿ ಚಾಮುಂಡಿ ನಾನ್

ಗಂಡುಸೆ ಪಿಡಿದು ಚಂಡಾಡುವೆ ಕೇಳ್

ಓ ಕರಳು ಬಳ್ಳಿಯೇ

ಗರಗಸವಳ್ಳಿ ಯಾಗು

ನಿಷ್ಕರುಣೆಯ ಕೊರಳಿಗೆ ಮುಳ್ಳಾಗು

ಎಂಬ ಮಾತು ಆಕ್ರಮಣ ಶೀಲ ಪುರುಷವರ್ಗವನ್ನು ದೂಷಿಸುತ್ತಾ, ಮುಂದಿನ ಹೆಣ್ಣು ಸಂಕುಲಕ್ಕೆ ನಿರ್ದಯತೆಯಿಂದಿರುವ ಪುರುಷನನ್ನು ಸಂಹರಿಸುವ ಉರುವಾಗುವಂತೆ ಎಚ್ಚರಿಕೆಯ ಮಾತುಗಳು ಈ ಕವಿತೆಯ ಮೂಲಕ ವ್ಯಕ್ತಗೊಂಡಿವೆ.

ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣು ಹುಟ್ಟಿನಿಂದಲೇ ಶೋಷಣೆಗೆ ಒಳಗಾಗಿ ನರಳುವಂತಾಗಿದೆ. ಆಧುನಿಕ ಕಾಲದಲ್ಲೂ ಮೌಢ್ಯ ಮೂಲದ ಈ ಧೋರಣೆ ಮುಂದುವರೆದು ಮನುಷ್ಯನ ವೈಚಾರಿಕ ಪ್ರಜ್ಞೆಯೇ ಸವಾಲೆನಿಸಿದೆ. ಹೆಣ್ಣು ಮಗುವಿನ ಜನನ ಸಂದರ್ಭದಲ್ಲಿ ಕುದು ಬರುವ ಕೌಟುಂಬಿಕ ಹಾಗೂ ಸಾಮಾಜಿಕ ಭಾವನೆಗಳನ್ನು ವ್ಯಕ್ತ ಪಡಿಸುತ್ತಾ ಪುರುಷ ಪ್ರತಿಷ್ಠೆಯ ಅಟ್ಟಹಾಸವನ್ನು ವಿಡಂಬಿಸಿದ್ದಾರೆ. ಹೆಣ್ಣಿನ ಅಸಹಾಯಕತೆ, ದುಗುಡ ದುಮ್ಮಾನಗಳಿಗೆ ಸ್ತ್ರೀ ಸಂವೇಧನೆಯೊಂದಿಗೆ ಸಾಮಾಜಿಕ ಧೋರಣೆ ಬಹುಮುಖ್ಯ ಎಂಬುದನ್ನು

ತಂಗಿ ಹುಟ್ಟಿದಳು ಕವಿತೆ ಬಿಂಬಿಸುತ್ತದೆ.

ಸಂಭ್ರಮವಿಲ್ಲ,ಸಡಗರವಿಲ್ಲ

ಮನೆಯೊಳಗೆ ಸೂತಕದ ವಾತಾವರಣ

ಆಕೆಯಂತೆಯೇ

ಬತ್ತಿಹೋಗಿದೆ ಎದೆಹಾಲು

ಹಡೆದವ್ವ ಕೊರಗುವಳು

ಜೋಲಿ ಏರಿಸಲು ಮೊಳೆಯೆ ಸಿಗಲೊಲ್ಲದು

ಅಪ್ಪಗೊಣಗುವನು

ಪೇಟೆಯಲ್ಲಿ ಮಿಠಾಯಿ

ಇದ್ದಕ್ಕಿದ್ದ ಹಾಗೆಯೆ ತುಟ್ಟಿಯಾಗಿದೆ

ಚಂದ ಮಾಡಿ ಪದ ಹಾಡುವ

ಅಜ್ಜಿಯ ಗಂಟಲೂ ಕಟ್ಟಿಹೋಗಿದೆ

ದೂರದಿಂದಲೇ ಶುಭ ಕೋರಿದ್ದಾರೆ

ಬಂಧುಗಳು

ಯಾರೊಬ್ಬರೂ ಸೂಚಿಸಿಲ್ಲ

ಮಗುವಿಗೆ ಹೆಸರು

ಹೋಗಲಿ ಬಿಡಿ

ಯಾರೋ ಸಮಾಧಾನ ಮಾಡುವರು

'ಸಾಕಮ್ಮ' 'ಸಾಕು' ಸಾಕು .........

ನಿಟ್ಟುಸಿರೇ ಹೆಸರಾಗಿ

ಮಗುವನು ಅಲಂಕರಿಸುವುದು

ನಿರಾಶೆ, ನಿರ್ಲಕ್ಷ್ಯ

ಹಸುಕಂದನಿಗೆ ಹೇಗೆ ಅರ್ಥವಾಗುವುದು?

ನುಣ್ಣನೆಯ ಸಣ್ಣ ದನಿ

ಜಡಜಗತ್ತ ಭೇದಿಸುವುದು

ಹಿಡಿಯಪ್ಪಿರುವ ತಂಗಿಯನು

ಮುಡಿಯಪ್ಪಿರುವ ಅಕ್ಕ

ಅಕ್ಕರೆಯಿಂದ ಅಪ್ಪುವಳು

ಅಭಯ ನೀಡುವಳು

ಬಹಳ ಹಿಂದಿನಿಂದಲೂ ಗಂಡು ಹೆಣ್ಣು ಎಂಬ ಭೇದ ಭಾವ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡು ಬರುವ ಅನಾರೋಗ್ಯಕರ ಹಾಗೂ ಅವೈಜ್ಞಾನಿಕ ಸಂಗತಿಯಾದುದು. ಹೆಣ್ಣನ್ನು ಕೀಳಾಗಿ ನೋಡುವ ಪ್ರವೃತ್ತಿ ಹೇಯವಾದುದು. ಹೆಣ್ಣು ಹುಟ್ಟಿದಾಗಲೇ ಪ್ರತಿಕ್ರಿಯಿಸುವ ತಂದೆ ಹಾಗೂ ಬಂಧು ಬಳಗದವರ ರೀತಿ ಅಮಾ ನವೀಯವಾದುದು ಇದನ್ನು ವಿಡಂಬಿಸುವ ಕವನ, ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿದ ಅಸಹಾಯಕಳಾದ ತಾಯಿ ಹಾಗೂ ಅಭಯ ನೀಡುವ ಅಕ್ಕನ ನಡವಳಿಕೆಗಳನ್ನು ಧ್ವನಿಪೂರ್ಣವಾಗಿ ಚಿತ್ರಿಸುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ತಾರತಮ್ಯದಿಂದ ಅವಕಾಶಗಳಿಲ್ಲದೆ ಅವಜ್ಞೆಗೆ ಗುರಿಯಾಗುತ್ತಿರುವುದು ಒಂದು ಸಾಮಾಜಿಕ ದುರಂತ . ಹೆಣ್ಣನ್ನು ಅಲಕ್ಷಿಸುವ ಸಮಾಜ ಅವಿವೇಕಿಯಾದುದು ಎಂಬ ಆಶಯ ಈ ಕವನದಲ್ಲಿ ಸಮರ್ಥವಾಗಿ ನಿರೂಪಿತವಾಗಿದೆ. ಕವಿತೆಯ ಕೊನೆಯ ಸಾಲು ಹೆಣ್ಣಿಗೆ ಹೆಣ್ಣೇ ರಕ್ಷಣೆ ನೀಡಿ ಸಹಾನುಭೂತಿಯ ಶಕ್ತಿಯಾಗಬೇಕಾದ ಅನಿವಾರ್ಯತೆಯನ್ನು ಧ್ವನಿಸುತ್ತದೆ.

ಕಲೆ ಮತ್ತು ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಸವಿತಾರವರು ತಮ್ಮದೇ ಆದಂತಹ ವಿಶಿಷ್ಟ ಬರವಣಿಗೆಯ ಮೂಲಕ ಪ್ರಚಲಿತದಲ್ಲಿದ್ದಾರೆ. ಪ್ರಸ್ತುತ ಸಮಾಜದ ಆಗು ಹೋಗು ಮತ್ತು ಸ್ತ್ರೀ ಮನುಸ್ಸುಗಳ ನಡುವೆ ಇರುವಂತಹ ತಾಕಲಾಟ ಮತ್ತು ಅವಳ ಮನೋವೇದನೆಗಳು ಎಂತಹವು ಮತ್ತು ಹೆಣ್ಣಾದವಳು ಸಾಹಿತ್ಯದ ಮೂಲಕ ಅಭಿವ್ಯಕ್ತಿಸುವ ಕ್ರಮ ಎಂತದ್ದು ಎಂಬುದನ್ನು ಸವಿತಾರವರ ಎಲ್ಲಾಕವಿತೆಗಳಲ್ಲೂ ಕಾಣಬಹುದಾಗಿದೆ.

**8. ದು. ಸರಸ್ವತಿ**

ದಲಿತ ವರ್ಗದಿಂದ ಮತ್ತು ಅಕ್ಷರ ವಂಚಿತ ಸಮುದಾಯದಿಂದ ಬಂದರೂ ಎಲ್ಲಾ ಮನಸ್ಥಿತಿಗಳಿಗೂ ತಮ್ಮ ಬರವಣಿಗೆಯ ಮೂಲಕ ಪ್ರಸ್ತುತರಾದ ಲೇಖಕಿಯರದು. ಸರಸ್ವತಿ. ವ್ಯಕ್ತಿಯ ಅಳಲನ್ನು ಸಮುದಾಯಗಳ ಅಳಲಾಗಿ ಮಾರ್ಪಡಿಸಿಕೊಂಡು ಆ ಮೂಲಕವೇ ತನ್ನ ತಿಳುವಳಿಕೆಯನ್ನು ಶುಭ್ರಗೊಳಿಸುವ ಕೆಲಸ ದು.ಸರಸ್ವತಿವರದು. ರಂಗಭೂಮಿ, ಚಿತ್ರಕಲೆ, ಮಹಿಳಾ ಮತ್ತು ದಲಿತ ಚಳುವಳಿ

ಮುಂತಾದ ಸಾಮಾಜಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಂಡವರು ದು. ಸರಸ್ವತಿಯವರು.

ಮೊದಲ ಕವನ ಸಂಕಲನ ,' ಹೆಣೆದರೆ ಜೇಡನಂತೆ' ಕವನ ಸಂಕನಲಕ್ಕೆ 1997 ರಲ್ಲಿ ಕಂಡೆಗೋಡ್ಲು ಕಾವ್ಯಪ್ರಶಸ್ತಿ ಲಭಿಸಿದೆ.

ಎರಡನೆ ಕವನ ಸಂಕಲನ ' ಜೀವ ಸಂಪಿಗೆ' 2006 ರಲ್ಲಿ ಪ್ರಕಟಗೊಂಡಿದೆ.

ಬದುಕಿನೊಂದಿಗಿರುವ ಉತ್ಕಟವಾದಂತಹ ಪ್ರೀತಿ ಮತ್ತು ಆತ್ಮವಿಶ್ವಾಸ ಪ್ರತಿ ಪದದಲ್ಲೂಮೂಡಿಬಂದಿದೆ. ಬದುಕೆಂಬುದು ಅಧೀರತೆಯಲ್ಲ, ದಿಟ್ಟತನವೂ ಸೇರಿದೆ. ಎಂಬುದನ್ನು ಕವಿತೆಗಳ ಮೂಲಕ ವ್ಯಕ್ತ ಪಡಿಸುವ ಕಲಾವಂತಿಕೆಯ ಕ್ರಿಯೆ ದು.ಸರಸ್ವತಿಯವರದು.

**ಜೀವ ಸಂಪಿಗೆ - ಸಂಕಲನದಲ್ಲಿ**

ತಬ್ಬಲಿಗಳ ಜೋಗುಳ ಕಂಡಿಲ್ಲವೆ ಕನುಸು? ಹೆಣಿಗೆ ನಿಲ್ಲದು, ಪರದೆ,ಕೊರಡು ಉಸಿರಾಡಿತು, ನೀವೊಮ್ಮೆ ಶಪಿಸಿ ಮುಂತಾದ ಕವಿತೆಗಳು ಪ್ರಮುಖವಾಗಿ ಕಂಡು ಬರುತ್ತವೆ. .

ಹೆಣೆದರೆ ಜೇಡನಂತೆ, ಕವನ ಸಂಕಲನದಲ್ಲಿ ವ್ಯಕ್ತಿ ಮತ್ತು ಲೋಕಗಳ ನಡುವಿನ ಸಂಬಂಧಗಳ ಸೂಕ್ಷ್ಮತೆಯನ್ನು ಕಂಡು ಕೊಳ್ಳಲು ಕವಿಯ ಬಯಕೆಯಾಗಿದೆ. ಈ ಎಲ್ಲಾಸೂಕ್ಷ್ಮಗಳನ್ನು ಹೆಣ್ತನದ ಕೇಂದ್ರದ ಮೂಲಕ ಗ್ರಹಿಸುವ ಸಾಧ್ಯತೆ ಕಂಡು ಬರುತ್ತದೆ. ಎಲ್ಲಾಕವಿತೆಗಳಲ್ಲೂ ಹೆಣ್ಣಿನ ಅನುಭವ ಲೋಕದಲ್ಲಿ ಶೋಧಿತವಾಗಿ ಪ್ರಕೃತಿ ರೂಪಕಗಳಲ್ಲಿ ಅರಳಿಕೊಳ್ಳುತ್ತವೆ. ಒಟ್ಟಾರೆ ಸಂಕಲನದ ಕೇಂದ್ರ ಪ್ರತಿಮೆ ಕಾಯುವಿಕೆ ಮತ್ತು ಅವಲಂಬಿತರ ಆತಂಕ ಕಂಡು ಬರುತ್ತದೆ.

**' ಆಮೆ ಆಗಿದ್ದರೆ' ಕವಿತೆಯಲ್ಲಿ**

ಆಮೆ ಆಗಿದ್ದರೆ

ಚಿಪ್ಪಿನ ಕತ್ತಲೊಳಗೆ

ಗಪ್ಪೆಂದು ನುಸುಳಿ

ಅವಮಾನ

ಅತ್ತು ಬಸವಳಿಯ ಬಹುದಿತ್ತು.

ತಪ್ಪಿ

ಒಪ್ಪಿಮೊರೆ ಇಡಬಹುದಿತ್ತು.

ಹಮ್ಮುಬಾಗಿ ಬೆಂಡಾಗುತ್ತಿತ್ತು

ಅಸೂಯೆ ಅಳಿಸಿ ಹೋಗುತ್ತಿತ್ತು

ನಾ ಹೆಂಗೂ ಸಾಗಿದ್ದವಳು

ಚಿಪ್ಪಿಲ್ಲದೆ

ವೇಗದ ಹೊಡೆತಕ್ಕೆ ಮುಕ್ಕಾದವಳು

ತನ್ನ ರಕ್ಷಣೆಗೆ ಚಿಪ್ಪನ್ನು ಹೊಂದಿರುವ ಆಮೆ ತನ್ನನ್ನು ತಾನು ರಕ್ಷಿಸಿಕೊಳ್ಳುವ ಜೀವಿ, ಆದರೆ ಹೆಣ್ಣಿಗೆ ಸಮಾಜದ ಕಟ್ಟು ಪಾಡಿದ್ದರೂ ಸಹ ರಕ್ಷಣೆಯಿಂದ ಅನಾಥಸಿತಿ ಕೊನೆಯ ಸಾಲುಗಳಲ್ಲಿ ಕಂಡು ಬಂದಿದೆ. ರಕ್ಷಣೆ ಮತ್ತು ಸ್ವಾತಂತ್ರ್ಯ ಹೆಣ್ಣಿಗೆ ಯಾವ ರೀತಿಯದು ಎಂಬುದು ಇಂದಿಗೂ ಪ್ರಶ್ನಾರ್ಥಕವಾಗದೆ ಉಳಿದಿರುವುದನ್ನು ನೋಡಬಹುದು.

ನಾ ಹೆಂಗೂ ಸಾಗಿದ್ದವಳು

ಚಿಪ್ಪಿಲ್ಲದೆ

ವೇಗದ ಹೊಡೆತಕ್ಕೆ ಮುಕ್ಕಾದವಳು - ಎಂಬುದು ಶತಮಾನಗಳಿಂದ ಪುರುಷ ಕೇಂದ್ರಿತ ಮೌಲ್ಯದ ಸಮಾಜ ಯಾವ ರೀತಿ ಹೆಣ್ಣನ್ನು ಶೋಷಣೆಗೆ ಒಳಪಡಿಸಿದೆ. ಎಂಬುದನ್ನು ಧ್ವನಿಸುತ್ತದೆ.

'ಹೂ ಅರಳಿದ ಸದ್ದು' ಕವಿತೆಯಲ್ಲಿ

ಮೌನ ಮಲಗಿದೆ ಅಲ್ಲದೆ ತಣ್ಣಗೆ

ತಟ್ಟಲು ಇವಳು ಪದಗಳಿಗೆ

ತಡಕಾಡುತ್ತಾಳೆ ಇಲ್ಲಿ

ನಿಶ್ಯಬ್ಧ ಅಲುಗಾಡುವಂತೆ

ತುಟಿ ಹೇಳಿದ್ದೇನು?

ರೆಪ್ಪೆ ಹೊದ್ದು ಮಲಗಿದ್ದ ಕಣ್ಣು

ಚಣ ಮಿನುಗಿ ಸೂಚಿಸಿದ್ದೇನು

ಸೂಚನೆಗಳು ಸುಳಿವು ಬಿಟ್ಟು ಕೊಡವು

ತಿಳಿದಂತೆನಿಸಿದರೂ ತಿಳಿಯದು

ಯಾವ ಮಾತಿನ ಪದಗಳಲಿ

ಮೌನವ ತಟ್ಟಲಿ

ಮಾತಿನ

ಕಾಗುಣಿತ ವ್ಯಾಕರಣಗಳ

ಗಿಡ ಮರ , ಮಣ್ಣು ಮುಗಿಲು ಹೇಳಿ ಕೊಟ್ಟಾವೆ?

ನೆಲಕೆ ಬೇರು ಬಿಟ್ಟು

ಮುಗಿಲಿಗೆ ಮುಖ ಮಾಡಿ

ಕೈಯ ಬಳ್ಳಿಗಳು

ತೂಗಿ ತೂ---ಗಿ ಸೋತಾಗ

ಒಡಲಿನಾಳದೊಳಗೊಂದು ಮಿಣುಕು

ಮಿಣುಕಿನೊಳಗೊಂದು ಆಲಾಪ

ಸದ್ದೇ ಇಲ್ಲ

ತಾಳ- ತಂತಿಗಳಿಲ್ಲ

ಕಾಗುಣಿತ - ವ್ಯಾಕರಣಗಳ ಬಂಧವಿಲ್ಲ

ಬರಿ ಆಲಾಪ

ಹಿಡಿಯಲು ಅವಳು

ಉಸಿರಿದಿದು ಕಲ್ಲ ಹೂವಾದಳು

ಹೂ ಅರಳಿದ ಸದ್ದು

ಅವನ ತಟ್ಟೆತೆ!

ನಮ್ಮ ಸಂಸ್ಕೃತಿಯ ಎಲ್ಲಾ ನೆಲೆಗಳು ಹೆಣ್ಣು ಜೀವಗಳ ಬಗ್ಗೆ ಅನಾದಾರದ ನಿಲುವನ್ನೇ ರೂಪಿಸಿಕೊಂಡಿವೆ. ಆದರೂ ಅವು ಉಳಿದುಕೊಂಡು ನೋವಿನ ಹಾದಿಯಲ್ಲಿಯೇ ವಿನಾ ನಿರಾಂತಕದ ಜಾಡಲ್ಲ. ಗಂಡು - ಹೆಣ್ಣುಗಳ ಪರಸ್ಪರ ಅಗತ್ಯ, ಅನಿವಾರ್ಯತೆ ಮತ್ತು ಭಾವನಾತ್ಮಕವಾದ ಬಂಧಕ್ಕೂ ಲಿಂಗ ನಿರ್ಧಾರಿತವಾದ ಅಸಮತೆಗೂ ಸಂಬಂಧವಿಲ್ಲ. ಕವಿತೆಯು ಕೇವಲ ಅನುಭವಗಳ ನಿರೂಪಣೆಯಲ್ಲ, ಅದು ಪ್ರತಿಮೆಗಳ ಮೂಲಕ ನೆಡೆಯುವ ಪ್ರತಿ ಸೃಷ್ಟಿ ಎಂಬ ತಿಳುವಳಿಕೆ ಇಲ್ಲಿ ಧ್ವನಿಸುತ್ತದೆ. ಬರವಣಿಗೆಯೊಂದಿಗೆ ಕಲಾವಂತಿಕೆಯ ಜಾಡು ಬಹು ಮುಖ್ಯವಾಗಿ ಕಂಡು ಬಂದಿದೆ.

ಓ ಹೆಣ್ಣೆ ಕವಿತೆಯಲ್ಲಿ

ನೀ ಮುಡಿಲಿಗೆಸೆದ ಹಿಡಿ ಬದುಕ

ನಿನಗೇ ಮುಡಿಪು

ಒಪ್ಪಿಸಿಕೊಳ್ಳುವ ಕ್ರಿಯೆ ಸಹಜವಾಗಿ ಕಂಡು ಬಂದಿದೆ.

ಕನಸು ಮತ್ತು ಹೆಣಿಗೆ ನಿಲ್ಲದು ಕವಿತೆಗಳಲ್ಲಿ ಸಂಸಾರದೊಂದಿಗಿನ ಒಡನಾಟ ಬದುಕಿನ ಜಂಜಾಟಗಳ ತೀವ್ರತೆ, ಹತಾಷೆಗಳನ್ನು ಕನಸಿನ ರೂಪದಲ್ಲಿ ಎಳೆ ಎಳೆಯಾಗಿ ಮೂಡಿ ಬಂದಿವೆ.
ಶೋಷಿತ ಸಮುದಾಯದೊಳಗೆ ಹುಟ್ಟಿ ಬೆಳೆದ ಹೆಣ್ಣು ಮಗಳು ಎಲ್ಲದರಿಂದ ಮುಕ್ತಿ ಪಡೆಯುವ ಬಯಕೆ ಇದ್ದರೂ ಸಹ ಸಮಾಜದ ಒಂದು ಕೊಂಡಿ ಕಳಚಿ ಸ್ವಾತಂತ್ರ್ಯ ಕೊಡುವ ನೆವದಲ್ಲಿ ಮತ್ತೆ ಏಳಲಾರದಂತ ಕಂದಕಕ್ಕೆ ದೂಡುವ ಕ್ರಿಯೆ ಇಲ್ಲದೆ ಶೋಷಿತ ಮತ್ತು ದಲಿತ ಸಮುದಾಯಗಳ ನೋವು, ಹತಾಷೆ ಮತ್ತು ಮನೋಭಿಲಾಷೆ ಯಾವ ಬಗೆಯದು ಎಂಬುದನ್ನು ಸರಸ್ವತಿಯವರ ಎಲ್ಲಾ ಕವಿತೆಗಳಲ್ಲೂ ಬಿಂಬಿತವಾಗಿರುವುದನ್ನು ನೋಡಬಹುದು.

**ಹೆಚ್.ಎಲ್.ಪುಷ್ಪ**

ಸಮಕಾಲೀನ ಸಾಹಿತ್ಯದಲ್ಲಿ ವಿಭಿನ್ನ ದೋರಣೆಯೊಂದಿಗೆ ಸಾಹಿತ್ಯ ವಲಯದ ಕಾವ್ಯ ಮಾಧ್ಯಮದಲ್ಲಿ ಗುರ್ತಿಸುವ ಲೇಖಕಿ ಹೆಚ್.ಎಲ್. ಪುಷ್ಪರವರು .

ಮೊದಲ ಸಂಕಲನ , ಅಮೃತ ಮತಿ ಸ್ವಗತ (1992) ಎರಡನೆ ಕವನ ಸಂಕಲನ ಗಾಜುಗೋಳ (1999) ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಕಾವ್ಯ ಸಕ್ತಿಯ ತೀವ್ರ ಅಭಿಲಾಷೆಯೊಂದಿಗೆ ವಿಮರ್ಶೆಯ ಹಾದಿಯಲ್ಲೂ ಹೆಸರು ಮಾಡಿರುವ ಲೇಖಕಿ ಪುಷ್ಪ ಎನ್ನಬಹುದು.

**ಅಮೃತ ಮತಿ ಸ್ವಗತ ಕವನ ಸಂಕಲನದಲ್ಲಿ**

ತೆರೆದ ಬಾಗಿಲುಗಳು, ಆಮೆಗಳು, ಅಮೃತ ಮತಿ ಸ್ವಗತ ಪ್ರಶ್ನೆಗಳು, ಹೊಸಪೆನ್ನು, ಆನೆಗಳ ಹಾಡು ಮುಂತಾದವು ಪ್ರಮುಖ ಕವಿತೆಗಳಾಗಿವೆ.

ನಮ್ಮ ಸುತ್ತಮುತ್ತಲಿನ ವಿಷಮ ಸ್ಥಿತಿಗೆ ಸ್ಪಂದಿಸುವ ಮನಸ್ಸಿದ್ದರೂ ಅವಕಾಶ ವಂಚಿತರಾಗುತ್ತೇವೆ. ಮತ್ತು ಮೌನ ನಮ್ಮನ್ನು ಆಳುತ್ತದೆ. ಇಂತಹ ಸಂದರ್ಭದಲ್ಲಿ ಕ್ರಿಯೆ ಎಂಬುದು ಅನುಕೂಲಕರವಾಗಿ ಕಂಡುಬಂದಾಗ ಬರವಣಿಗೆ ಹೇಗೆ ರೂಪಕವಾಗಿ ಕಂಡು ಬರುತ್ತದೆ ಎಂಬುದು ಪುಷ್ಪರವರ

ಎಲ್ಲಾಕವಿತೆಗಳು ಧ್ವನಿಸುತ್ತವೆ. ಸ್ತ್ರೀ ಸಂವೇದನೆ ಎಂಬುದು ಭಾವಾನತ್ಮಕತೆಗಿಂತ ಅನುಭವಗಳೊಂದಿಗೆ ಕ್ರಿಯಾತ್ಮಕವಾಗಿರುವುದು ಗಮನಾರ್ಹ.

ಗಾಜುಗೋಳ - ಕವನ ಸಂಕಲನದಲ್ಲಿ ಕಾದಿಯೊಳಗಿನ ಕಾಮನಬಿಲ್ಲು, ಕಲ್ಲಾಗುವ ಹುಡುಗಿಯಹಾಡು, ಕವಿತೆ ಮತ್ತು ಕೆನ್ನೆ ಸರಪಳಿ ಮುಂತಾದವು.

ಪುರುಷ ಪ್ರಧಾನ ಸಮಾಜವನ್ನು ಮೆಚ್ಚಿಸುವ ಯಾವುದೇ ಹುಂಬತನವಿಲ್ಲದೆ ವಾಸ್ತವದ ನೆಲೆಯನ್ನು

ಬಿಚ್ಚಿಡುವ ಸರಳ ಕಸುಬುಗಾರಿಕೆಯ ಬರಹ ಪುಷ್ಪಾರವರದು

'ಪ್ರಶ್ನೆಗಳು ' ಕವನದಲ್ಲಿ

ನಿನಗೆ ಗೊತ್ತಿಲ್ಲಹುಡುಗಿ

ಮೌನಗಳಿಗೆ ಆಕಾರ ಕೊಡುವಲ್ಲಿ

ಖುಷಿ- ಖುಷಿ ಅರ್ಥ ಹುಡುಕುವಲ್ಲಿ

ನೀನು ತರಣಿಯಾಗುತ್ತೀ ಎಂದು.

ಎಂಬ ಸಾಲುಗಳು ಶತ- ಶತ ಮಾನಗಳಿಂದ ಹೆಣ್ಣು ಹೇಗೆ ರೂಪಿಸಲ್ಪಡುವಳು , ಮೌನದಲ್ಲೇ ಅವಳು ಬೆಳೆಯುತ್ತಾ ಕಳೆದು ಹೋಗುವ ಕ್ರಿಯೆಯನ್ನು ತಿಳಿಸುತ್ತದೆ.

ಜನ್ನನ ಯಶೋಧರ ಚರಿತೆಯ ಅಮೃತ ಮತಿಯು ಇಂದಿಗೂ ಕಾವ್ಯಾತ್ಮಕವಾಗಿ ಪ್ರಸ್ತುತಳಾಗೇ ಇದ್ದಾಳೆ. ಪ್ರಶ್ನೆ ಮಾಡುವ ಮನಸ್ಸುಗಳಿದ್ದರೂ ಸಹ ಅದನ್ನು ಸ್ವೀಕರಿಸುವ ವರ್ಗ ಎಷ್ಟರ ಮಟ್ಟಿಗೆ ಸ್ವೀಕರಿಸುತ್ತದೆ. ಎಂಬುದು ಮುಖ್ಯವಾಗುತ್ತದೆ.

' ಅಮೃತ ಮತಿ ಸ್ವಗತ'ಕವಿತೆಯಲ್ಲಿ

ಸವಿಯಿದೆ ನೋಡು ,

ಒರಟು ಚಾಟಿಯ ಚುಂಬನದಲ್ಲಿ

ನವಿರಿದೆ ನೋಡು, ನಾದವಿದೆ ನೋಡು

ಒರಟು ಬೆರಳುಗಳ ಕಂಪನದಲ್ಲಿ

ಏನಿದು ಮಿಡಿತ, ಮುಳ್ಳುಗಳ ಮುತ್ತಿನಲಿ

ಅದಕೆ ನೋಡು ದೊರೆ

ನಿನ್ನ ಚಂದನ ಗಂಧ ಸುವಾಸಿತ ತೆಕ್ಕೆ

ಬಿಟ್ಟು ಈ ಕಾಡ ಪೊದೆಯ ಕರೆಗೆ

ಹಾಡಾಗಿ ಹಾಡಿದ್ದು

ಆಲಿಸಿದ ನಾದಕ್ಕೆ ಒಲಿದ ಅಮೃತ ಮತಿ, ಬದಗನೊಂದಿಗೆ ಕೊಡುವ , ಜೀವನ ನಡೆಸುವ ದಿಟ್ಟತನವಿದ್ದರೂ ಅದು ಹೆಣ್ಣು ಎಂದು ಅರ್ಥ ಪಡೆದ ಮಂತ್ರಕ್ಕೆ ಸೀಮಿತವಾಗಿಸುವ ಕ್ರಿಯೆ ಬಹಳ ಹಿಂದಿನಿಂದಲೂ ನಡೆದು ಬಂದಿದೆ.

ಮೈಯ ವಾಸನೆಗೆ ಜನ್ಮಾಂತರಗಳಿಲ್ಲ

ಬಂಧವಿಲ್ಲ ಈ ಪಾಡುಗಳಿಗೆ

ಹೊರುವ ಪಾಪಗಳಿಲ್ಲ

ಹಸಿವಿನೆದುರು ಏನಿಲ್ಲ, ಏನೆಲ್ಲ ಭೀತಿ

ಕತ್ತಲೆಯೂ ಕೂಡ ಅಳುಕುತ್ತದೆ

ಕಂಪಿಸುತ್ತದೆ ಧರ್ಮದ ಸೂಕ್ಷ್ಮ ಜಂಜಾಟದಲ್ಲಿ

ನಾವು ಜನ್ಮವೆತ್ತುತ್ತಲೇ ಇದ್ದೇವೆ

ಅಮೃತ ಮತಿಯರಾಗಿ

ನಿನ್ನಂಥವನ ಗದ್ದುಗೆಯ ರಾಣಿಯರಾಗಿ

ಅವನು ಬದಗನಾಗಿ

ನಮಗುತ್ತರವಾಗಿ

ತನ್ನತನವನ್ನು ತಳೆದುಕೊಂಡು ತಾಕಲಾಡುವ ಕ್ರಿಯೆ ಒಂದೆಡೆಯಾದರೆ, ದಾಂಪತ್ಯ ಸುಖದಿಂದ ವಂಚಿತಳಾದ ಹೆಣ್ಣು ದಿಟ್ಟತನದಿಂದ ಬೇರೊಬ್ಬನೊಂದಿಗೆ ಅನುರಕ್ತಳಾದಾಗ ಸಮಾಜ ನೋಡುವ ರೀತಿ ಪರಂಪರೆಯಿಂದ ಹರಿದು ಬಂದಿದೆ. ಇಂದಿಗೂ ಸಹ ಆಲೋಚನೆಗಳು ಮುಂದುವರೆದರೂ ಅದನ್ನು ಸ್ವೀಕರಿಸುವ ಮನಸ್ಸುಗಳ ಪರಿ ಎಂತದ್ದು ಎಂಬುದು ನಾವು ಜನ್ಮವೆತ್ತುತ್ತಲೇ ಇದ್ದೇವೆ ಅಮೃತ ಮತಿಯರಾಗಿ' ನಿನ್ನಂಥವನ ಗದ್ದುಗೆಯ ರಾಣಿಯರಾಗಿ' ಎಂಬ ಸಾಲುಗಳಲ್ಲಿ ಮನಸ್ಸಿನ ಆಳದಲ್ಲಿ ಹುದುಗಿದ್ದಂತಹ ಸೂಕ್ಷ್ಮ ಸಂವೇದನೆಗಳು ಪುಟಿಯುವ ಒಂದು ಕ್ರಿಯೆ ವ್ಯಕ್ತವಾಗುತ್ತದೆ.

'ಹಣತೆಗಳ ಹಾಡು' ಕವಿತೆಯಲ್ಲಿ

ನೆನಪುಗಳು ಮಧುರ, ತಟ್ಟಿಮಲಗಿಸಬೇಕು ಕೆಲವನ್ನು

ಮುಟ್ಟಿ ಮಿಡಿಸಬೇಕು ಹಲವನ್ನ

ಸೋಲಿಲ್ಲ ಸಾವಿಲ್ಲ ಕನಸುಗಳಿಗೆ

ಇರುವುದೊಂದೇ ಬದುಕು

ಹಣತೆ ಬೆಳಕಲ್ಲಿ ನಿತ್ಯ ನೂತನ ನನ್ನ ಕನಸು

ಯೌವ್ವನದಲ್ಲಿ ಮೂಡಿದಂತಹ ಪ್ರೇಮದ ತುಡಿತ, ದಾಂಪತ್ಯದ ಸಂದರ್ಭದಲ್ಲಿ ಅವು ಸವಿನೆನಪುಗಳಾಗಿ ಕಾಡಿದಾಗ ಯಾವ ರೀತಿ ಹೆಣ್ಣಾದವಳು ಅದಕ್ಕೆ ಸ್ಪಂದಿಸುತ್ತಾಳೆ ಕನಸು ಮತ್ತು ನೆನಪುಗಳ ಮೂಲಕ ಬಾಳಿನ ಹಣತೆಗೆ ಜೀವ ತುಂಬುವ ಕ್ರಿಯೆ ಮೂಡಿದೆ.

'ಹೊಸ ಪೆನ್ನು'

ಪ್ರೀತಿಸಿದವನಿಂದ ದೂರಾದ ಹೆಣ್ಣು ಮತ್ತೆ ಪ್ರಿಯತಮನನ್ನು ನೆನೆದು ಅವನಿಂದಲೇ ಪಡೆದ ಪೆನ್ನಿನಲ್ಲಿ ಅವನ ಚಿತ್ರಣ ಬಿಡಿಸುವಾಗ ಎಡವುವ ಕ್ರಿಯೆ ಈ ಕವನದಿಂದ ಬಿಂಬಿತವಾಗಿದೆ.

ಹೊಸದಾಗಿ ಪಡೆದ ಪೆನ್ನಲ್ಲಿ

ನಿನ್ನ ಚಿತ್ರಿಸಬೇಕೆಂದು ಹೊರಟೆ

ಗೆರೆಗಳು ಮೂಡಿ , ಮುಖಗೀಚು- ಗೀಚು

ರೂಪ ವಿರೂಪ

ನಿನ್ನ ನೆನಪಿಗೆಂದು ಕೊಟ್ಟ ಪೆನ್ನಲ್ಲಿ

ನಿನ್ನ ದಲ್ಲದ ಬೇರೆ ಚಿತ್ರ ತೇಲಿದಾಗ

ಅಪರಾಧಿ ಎಂದು ನಾಚಿ

ಮುಖಕ್ಕೆ ಸೆರಗಳೆದೆ.

ಪ್ರೀತಿಯಿಂದ ವಂಚಿತಳಾಗಿ ಅಪರಾಧಿ ಬಾವ ಕಾಡಿದರೂ ಕೂಡ ಭಾವನೆಗಳು ಮನದಲ್ಲಿ ಒತ್ತರಿಸಿಕೊಂಡು ಕನಸುಗಳಾಗಿ- ನೆನಪುಗಳಾಗಿ ಹೇಗೆ ಕಾಡುತ್ತವೆ. ಅವು ಸಂಸಾರ ನೌಕೆಯಲ್ಲಿ ಹೇಗೆ ನೆನಪುಗಳಾಗಿಯೇ ಉಳಿಯುತ್ತವೆ. ಎಂಬುದು ಮುಖ್ಯವಾಗುತ್ತವೆ.

ಗಾಜುಗೊಳ ಕವನ ಸಂಕಲನದಲ್ಲಿ

ಲೌಕಿಕ ಮತ್ತು ಅಲೌಕಿಕ ತಾಕಲಾಟಗಳ ಜೊತೆಗೆ ನಿಜ ಬದುಕಿನ ಹಸಿ ಹಸಿ ಚಿತ್ರಣವಿರುವುದನ್ನು ನೋಡಬಹುದು.

'ಕಾದಿಯೊಳಗಿನ ಕಾಮನ ಬಿಲ್ಲು' ಕವಿತೆಯಲ್ಲಿ

ಜಾರುವ ಕಾಮನ ಬಿಲ್ಲಿನಡೆ

ಬೆಚ್ಚಗೆ ಮಲಗಿಕೊಂಡೇ ತೇಪೆ ಹಾಕುತ್ತಾ

ಚಳಿಗಾಲದ ಈ ದಿನಗಳಲಿ

ಹೌದು ನಾನು ಹೆಣ್ಣು

ನಾನೊಂದು ಸುಂದರ ಕೌದಿ

ಮನಸ್ಸಿನ ಭಾವನೆಗಳಿಗೆ ,ಕನಸುಗಳಿಗೆ ಸಾಕಾರವಾಗಿ ಜಾರುವ ಕಾಮನ ಬಿಲ್ಲಿದ್ದರೂ ಸಹ ಅದು ಕ್ಷಣಿಕದ ಸುಂದರತೆಗೆ ಮಾತ್ರ. ಹೆಣ್ಣಿನ ಬದುಕು ಜನ್ಮಾಂತರಗಳ ಕಟ್ಟುಪಾಡಿನೊಳಗೆ ಸಮಾಜದ ವಿಧಿನಿಯಮಗಳಿಗೆ ಬಳಕು ಮಾಡಿದ ಹಳೆಯ ಬಟ್ಟೆಗಳನೆಲ್ಲಾ ಸೇರಿಸಿ ನವೀನವಾದ ಒಂದು ಸುಂದರ ಕೌದಿಯಹಾಗೆ ಎಂಬ ವಾಸ್ತಾವಿಕ ನೆಲೆಗಟ್ಟನ್ನು ಕಟ್ಟಿಕೊಡುತ್ತದೆ.

ಕವಿ ವಿಮರ್ಷಕ 'ಹೆಚ್.ಎಸ್. ಶಿವಪ್ರಕಾಶ್' ಅವರು ಗುರ್ತಿಸುವಂತೆ

ವ್ಯಕ್ತಿ ಅನುಭವ ಮತ್ತು ಭಾಷೆಯಲ್ಲಿ ಸಿಕ್ಕುವ ಒಂದು ಸಣ್ಣ ಸುಳುಹನ್ನು ಹಿಡಿದುಕೊಂಡು ಹಿಂದೆ ಮೈ ವರೆಸಿಕೊಂಡಿರುವ ವಿಷಾದವನ್ನು ಹುಡುಕುತ್ತಾ ಹೋಗುತ್ತಾರಲ್ಲ ಅಂಥಹ ಭಾಷಿಕ ಪ್ರಯತ್ನಗಳೇ ನಮ್ಮನ್ನು ಗಾಢವಾಗಿ ಕಲಕುವ ಕವಿತೆಗಳು , ಮಿಕ್ಕವು ಅವುಗಳ ಕುಸುರಿ. ಕಸುಬುಗಾರಿಕೆ ಏನಿದ್ದರೂ ಅಂದಂತೆ ಹುಟ್ಟುವವು. ಅಂದಂದೆ ಸಾಯುವವು. ಅರೆ ರೂಪು ತಳೆದ ಮೂಕ ಭಾವನೆಗಳು ಅಂಗೈಯಲ್ಲಿ ಹಿಡಿದು ನೋಡಿದ ಇಂದು ನಾಳೆಗಳು. ಖಾಲಿ ಮಾತುಗಳ ಕಳಚೊಗರ ದಿಂಗಂಬರ ಮೌನಗಳು. ಇಡೀ ನಿಮ್ಮ ಕವಿತೆಗಳ ಅಪೂರ್ಣ ಕಟ್ಟಡಗಳ ಇಟ್ಟಿಗೆಗಳು ಎಂದಿದ್ದಾರೆ.

**10. ಮಮತಾ ಜಿ. ಸಾಗರ**

ಕವಿತೆಗಳಲ್ಲಿ ಕವಿಯ ವೈವಿಧ್ಯ ಮಯ ಜೀವನಾನುಭವಗಳು ಸಂಘಟಿಸಿರುವ ರೀತಿ ನಿಶ್ಚಿತ ಧಾಟಿ ಮತ್ತು ಏಕತಾನತೆಗೆ ಎಡೆ ಮಾಡುತ್ತದೆ. ಕಾವ್ಯ ಹುಟ್ಟಿ ಬೆಳೆದು ಮಾಗುವ ಒಂದು ಜೈವಿಕ ಕ್ರಿಯೆಯೇನು ಅಲ್ಲ ಸದ್ಯದ ತಾತ್ವಿಕ ಮತ್ತು ವೈಚಾರಿಕ ಪ್ರಣಾಳಿಕೆಯನ್ನು ಕಾವ್ಯರೂಪದಲ್ಲಿ ಧ್ವನಿಸಿದ ಇನ್ನೊಂದು ಪ್ರಯತ್ನ ಮಮತಾರವರದು . ಶಬ್ದದ ಅರ್ಥ ಮತ್ತು ಆಕಾರ ಅವಕಾಶಗಳ ಸಂಬಂಧಾಂತರಗಳನ್ನು ಕವಿತೆಗಳ ಮೂಲಕ ಕಟ್ಟುವ ಮತ್ತು ನೋಡುವ ಕ್ರಿಯೆ ಇದರಲ್ಲಿ ನೋಡಬಹುದು.

ಕಾಡನವಿಲನ ಹೆಜ್ಜೆ ಮತ್ತು ನದಿಯ ನೀರಿನ ತೇವ (1998) ಇವರ ಪ್ರಮುಖ ಕವನ ಸಂಕಲನಗಳಾಗಿವೆ ಮಮತಾರವರ ಎಲ್ಲಾ ಕವಿತೆಗಳಲೂ ಅಕ್ಷರ ಮಾಧ್ಯಮವನ್ನು ಮೀರುವ ಪ್ರಯತ್ನದೊಂದಿಗೆ ವಿಭಿನ್ನ ಆಲೋಚನೆಗಳಿಗೆ ಒಳಪಟ್ಟಿರುವುದನ್ನು ನೋಡಬಹುದು.

ನದಿಯ ನೀರಿನ ತೇವ ಕವನ ಸಂಕಲನದಲ್ಲಿ ಮಗ್ಗುಲಾದರೆ ರಾತ್ರಿ, ನೀವು ಜೊತೆಗಿದ್ದರೆ, ಪ್ರೀತಿಯ ಹುಡುಗ , ಚುಕ್ಕಿ ಎಂಬ ಚಂದ್ರನಿಗೊಂದು ಕಿವಿಮಾತು ಮುಂತಾದ ಕವಿತೆಗಳು ಪ್ರಮುಖವಾಗಿ ಕಂಡು ಬರುತ್ತದೆ.

ಸೃಜನಶೀಲತೆ ಎನ್ನುವುದು ದುರಂತದ ಅಂಚಿನಲ್ಲಿ ಬೆಳೆಯುವ ಹೂವಿನಹಾಗೆ, ಅದಕ್ಕೆ ಕೈ ಚಾಚಿದರೆ ಏನು ಬೇಕಾದರೂ ಆಗಬಹುದು ಕವಿತೆಗಳಲ್ಲಿ ಅಕ್ಷರ ಮಾಧ್ಯಮದ ಜೊತೆಗೆ ದೃಶ್ಯ ಮಾಧ್ಯಮವನ್ನು ಬಳಸಿಕೊಳ್ಳುವ ಕ್ರಿಯೆ ನಡೆಯುತ್ತಲೇ ಇದೆ. ಸದಾ ಎಚ್ಚರದ ಪ್ರಜ್ಞೆಯೊಂದಿಗೆ ಇಂದಿನ ಸಮಾಜದಲ್ಲಿನ ಸಮಸ್ಯಗಳನ್ನು ತನ್ನ ಗಟ್ಟಿ ನಿಲುವಿನ ಬರವಣಿಗೆಯೊಂದಿಗೆ ತೋರಿಸಿಕೊಡುವ ಕ್ರಿಯೆ ಮಮತಾರವರದು.

'ಮಗ್ಗುಲಾದರೆ ರಾತ್ರಿ'- ಕವಿತೆಯಲ್ಲಿ

ಇವಳು ಕತ್ತಲ ಕನ್ಯೆ
ಅಡಗಿದ್ದ ಸೂರ್ಯನ್ನ
ಆಕಾಶಕ್ಕೆ ಕೊಡವಿ
ಮತ್ತೆ ಮುಡಿ ಕಟ್ಟುತ್ತಾಳೆ

ಸಾವಿರ ಗಂಡರಿಗೆ ಮೊಲೆಯುಣಿಸಿ
ಲಾಲಿ ಹಾಡುತ್ತಾಳೆ
ಅವರು ಅಲ್ಲೇ ......ಹಾಗೇ .....
ತಣ್ಣಗೆ, ಅವಳ ಮಡಿಲಲ್ಲಿ
ಮಲಗುವ ಹಾಗೆ

ಹೆಣ್ಣಿನ ಜೈವಿಕ ಕ್ರಿಯೆಯನ್ನು ನಿಸರ್ಗದೊಂದಿಗೆ ಸಮೀಕರಿಸಿ ನೋಡುತ್ತಾ ಕತ್ತಲ ಕನ್ಯೆ ಹೆಣ್ಣಾದರಿಂದ ರಮ್ಯತೆಯ ಭಾವದೊಂದಿಗೆ ಹಗಲು ಮತ್ತು ರಾತ್ರಿಗಳು ದಿಗಂತದಲ್ಲಿ ನಡೆಸುವ ಕ್ರಿಯೆ ಕತ್ತತಲ್ಲಿ ಕನ್ಯೆಯ ಒಳ ಮನಸ್ಸನ್ನು ಬಚ್ಚಿಡುವ ಸಂದರ್ಭ ಮೂಡಿ ಬಂದಿದೆ.

ನೀವು ಜೊತೆಗಿದ್ದರೆ ಕವಿತೆಯಲ್ಲಿ

ನೀವು ಜೊತೆಗಿದ್ದರೆ ಹರಿವ ನದಿಗೆ ಮೈಕೊಟ್ಟು

ಆಕಾಶಕ್ಕೂ ಮುತ್ತಿಟ್ಟು

ವಿಶಾಲ ವೃಕ್ಷದ ತಂಪಿನಲಿ ತಂಗಬೇಕು

ಕೊಂಚ ಮರೆಯಬೇಕು

ಜೊತೆಗಾರನ ಜೊತೆಯಾಗಿರುವ ಬಯಕೆ ಒಂದೆಡೆಯಾದರೆ ಪ್ರೀತಿಯ ಹುಡುಗನ ಒಡನಾಟ ಒಂದು ಮಧುರ ನೆನಪಾಗಿ ಉಳಿದಾಗ ಕಾಡುವ ಮನಸ್ಸಿನ ಭಾವನೆಗಳನ್ನು ವ್ಯಕ್ತ ಪಡಿಸುವ ಹಂಬಲ ಮತ್ತು ಮಾನಸಿಕ ತಾಕಲಾಟಗಳನ್ನು ಯಥಾವತ್ತಾಗಿ ಚಿತ್ರಿತವಾಗಿವೆ.

'ಪಾಠ ಒಂದು - ಎರಡು- ಮೂರು'

ಅಡಿಗೆ ಮನೆಗೆ ಮಾತ್ರ ಸೀಮಿತಳಾದ ಹೆಣ್ಣು ಕಾಲಾನಂತರದಲ್ಲಿ ಬದಲಾವಣೆಯಾದ ಬಗೆಯನ್ನು ತಿಳಿಸುತ್ತಾ 'ಕನಸನ್ನಾದರೂ ಕಾಣಬೇಕು ಇಂಥದ್ದೊಂದು' ಎಂಬ ಮಾತುಗಳಲ್ಲಿ ವ್ಯಕ್ತಿ ಸ್ವಾತಂತ್ರ್ಯ ವೆಂಬುದು ಮುಖ್ಯವಾಗುತ್ತದೆ.

ಭಾಷೆ ಚಪಾತಿ ಹಿಟ್ಟಿನ ಹಾಗೆ

ಲಟ್ಟಿಸಿದರೆ ಗಂಡಾಗಿರಬೇಕು

ಅಥವಾ ಮೂರು ಮೂಲೆ

ಬೇರೆ ಆಕಾರವೇ ಬಾರದು ಅದಕೆ

ಎಂಬಲ್ಲಿ ಭಾಷೆ ಕೇವಲ ಭಾಷೆಯಾಗೇ ನಮ್ಮ ಸಾಮಾಜಿಕ ಜೀವನದ ಒಂದು ಬಹುದೊಡ್ಡ ಶಕ್ತಿಯಾಗುವ ಬಗೆಯನ್ನು ತಿಳಿಸುತ್ತಾರೆ.

ನಮ್ಮದು ಹೊಸಲೋಕ

ಅಲ್ಲಿ ದೇವರಿಲ್ಲ

ಕೊಡುವವರಿಲ್ಲ

ಕೊಳ್ಳುವವರೂ ಇಲ್ಲ

ಅಲ್ಲಿ ಭಾಷೆಗೆ ಮಿತಿ ಇಲ್ಲ

ಮಾತಿಗೆ ಅಹಂಕಾರವಿಲ್ಲ.

ಎಂಬಲ್ಲಿ ಎಲ್ಲಾ ವಾಸ್ತವಗಳನ್ನು, ಅಹಮಿಕೆಗಳನ್ನು ಮೀರಿ ಸ್ವಾತಂತ್ರ್ಯವನ್ನು ಪಡೆಯುವ ಸಹಜತೆ ಕಾಣುತ್ತದೆ.

ಮಮತಾರವರು ಸಾಮಾಜಿಕ ಕಳಕಳಿ ಹೊಂದಿ ಹೆಣ್ಣು ಕೇವಲ ಬಂಧನದ ಬಂಧುವಲ್ಲ ಸ್ವಾತಂತ್ರ್ಯದ ಜೊತೆಗೆ ಅವಳ ಆಲೋಚನೆಗೂ ಮುಕ್ತತೆ ಇದ್ದಾಗ ಮಾತ್ರ ಅವಳು ಎಲ್ಲಕ್ಕೂ ಅರ್ಹಳಾಗುತ್ತಾಳೆ. ಮಾನಸಿಕ ಸ್ಥೈರ್ಯ ಯಾವ ಬಗೆಯಲ್ಲಿ ಒಡ ಮೂಡಿದರೆ ಸಮಾಜದ ಸರ್ವದೋಮುಖ ಬೆಳವಣಿಗೆ ಸಾಧ್ಯವಾಗುತ್ತದೆ ಎಂಬುದನ್ನು ಸಾಹಿತ್ಯದಲ್ಲಿನ ಎಳೆಯಾದ ಕಾವ್ಯದ ಮೂಲಕ ಕಟ್ಟಿಕೊಡುತ್ತಾ ಇಂದಿಗೂ ಚಿಂತನಾ ಶೀಲರಾಗೆ ಉಳಿದಿರುವುದ ಗಮನಾರ್ಹ ಸಂಗತಿಯಾಗಿದೆ.

ಒಟ್ಟಾರೆಯಾಗಿ ಕನ್ನಡ ಸಾಹಿತ್ಯ ಕೃಷಿ ಎಂಬುದು ತುಂಬಾ ಗಮನಾರ್ಹವಾದಂತಹ ಬೆಳವಣಿಗಹೆ ಪಡೆಯುತ್ತದೆ. ಸ್ತ್ರೀ ಸಹಜ ಸಂವೇದನೆಗಳನ್ನು ಆದರ್ಶಯುತವಾಗಿ ವೈಭವೀಕರಿಸದೆ, ಬದುಕನ್ನು ವಾಸ್ತವ ನೆಲೆಗಟ್ಟಿನಿಂದ ನೋಡುತ್ತಾ, ಜೀವನಾಭಿಮುಖವಾಗಿ ಹೆಣ್ಣು ಬದುಕಲು ಹಂಬಲಿಸುವುದು ಸಾಮಾನ್ಯ. ಆದ್ದರಿಂದ 1975 ರಿಂದೀಚೆಗೆ ಬಂದ ಎಲ್ಲಾ ಕವಿಯತ್ರಿಯರೂ ಸಹ ಬದುಕಿನ ಬಗೆ ತಮ್ಮದೇ ಆದಂತಹ ನೆಲೆಗಟ್ಟನ್ನು ತನ್ನದೇ ಆದ ರೀತಿಯಲ್ಲಿ ಹಲವು ಲೇಖಕಿಯರು ನೋಡಿದ್ದಾರೆ. ಇವರ ಎಲ್ಲಾನೋಟಗಳು ಕವಿತೆಗಳ ಮೂಲಕ ವ್ಯಕ್ತ ಗೊಂಡಿರುವುದು ಬಹಳ ಮುಖ್ಯವಾಗಿ ಕಂಡು ಬರುತ್ತದೆ. ಆದ್ದರಿಂದ ಮಹಿಳಾ ಕವಿತೆಗಳು ಕನ್ನಡ ಸಾಹಿತ್ಯದ ನೋಟವನ್ನು ವಿಭಿನ್ನ ದಿಕ್ಕಿಗೆ ಕೊಂಡೊಯ್ಯುವು ಎನ್ನಬಹುದು.

# ಅಧ್ಯಾಯ- 4

# ಮಹಿಳಾ ಕಾವ್ಯ : ಕವಯತ್ರಿಯರ ಆಂತರಿಕ ಜಗತ್ತು ಮತ್ತು ಅಸ್ತಿತ್ವದ ಹುಡುಕಾಟ

ಮಹಿಳಾ ಕಾವ್ಯ ನಿಜಕ್ಕೂ ಕನ್ನಡ ಸ್ತ್ರೀಯರ ಅನುಭವದ ದಾಖಲೆಯಾಗಿ ಮಹಿಳಾ ಕಾವ್ಯಕ್ಕೆ ಶೇಷ ಮಹತ್ವವಿದೆ. ಒಬ್ಬೊಬ್ಬ ಕವಯತ್ರಿಯೂ ತನ್ನದೇ ಆದ ಲೋಕಾನುಭವವನ್ನು ತಮ್ಮ ಕವಿತೆಗಳಲ್ಲಿ ಮೇಳೈಸಿದ್ದಾರೆ. ಮಹಿಳಾ ಸಾಹಿತ್ಯಗಳನ್ನು ನಗಣ್ಯವೆಂದು ಪರಿಗಣಿಸಿದ್ದ ಕಾಲದಲ್ಲಿ ಹಲವಾರು ಕವಯತ್ರಿಯರು ತಮ್ಮಲ್ಲೂ ಒಂದು ಅರಳುವ ಪ್ರತಿಭೆ ಇದೆ ಎಂಬುದನ್ನು ತೋರಿಸಿಕೊಟ್ಟ ಪ್ರಯತ್ನ ಸಾಮಾನ್ಯವಾದುದಲ್ಲ. ಮನೆಯ ಒಳಗೆ ಅಡಿಗೆ ಮನೆಯೇ ಪ್ರಪಂಚ ಸಂಸಾರ ನೌಕೆಯೇ ಅವಳ ಬಾಳ ಬಂಡಿ ಎಂದು ಹೆಣ್ಣನ್ನು ಮನೆಯ ವಾತಾವರಣಕ್ಕೆ ಸೀಮಿತಗೊಳಿಸಿದ್ದ ಪುರುಷ ಪ್ರಧಾನ ಸಮಾಜಕ್ಕೆ ಸವಾಲೊಡ್ಡುವಂತೆ ಮಹಿಳಾ ಕಾವ್ಯ ರಚಿತವಾಗಿದ್ದು ಗಮನಾರ್ಹ.

ನವೋದಯ ಪೂರ್ವದಲ್ಲಿ ಅಲ್ಲೊಂದು ಇಲ್ಲೊಂದು ಸಂದರ್ಭ ಎಂಬಂತೆ ಲೇಖಕಿಯರು ಹುಟ್ಟಿಕೊಂಡರೂ ಸಹ ಆಗಿನ ಕಾಲದಲ್ಲಿ ಅವು ಮಹತ್ವ ಪಡೆಯದೆ ಹೋದವು. ಮಹಿಳಾ ಕವಿತೆಗಳಿಗೆ ಸ್ಪಷ್ಟ ರೂಪು ಒದಗಿದ್ದು ಬಂಡಾಯದ ಸಂಧರ್ಭದಲ್ಲಿ ಎಂದು ಹೇಳಬಹುದು. ಮಹಿಳೆಯ ನಿಜ ಕೇಳಿಸಿದ್ದು ಆ ಸಂದರ್ಭದಲ್ಲಿಯೇ. ಹೆಣ್ಣು ತನ್ನ ಅನಿಸಿಕೆ , ಅಭಿಪ್ರಾಯಗಳನ್ನು ಅಭಿವ್ಯಕ್ತಿಸಲು ಸ್ವಾತಂತ್ರ್ಯವಿಲ್ಲದಂತಹ ಸಂದರ್ಭಗಳು ಹಿಂದಿನಿದಲೂ ತುಂಬಾ ಜಟಿಲವಾದ ಸಮಸ್ಯೆಗಳಾಗೆ ಮುಂದುವರೆದಿವೆ. ಬದುಕಿನಲ್ಲಿ ಎದುರಿಸಬಹುದಾದ ಕಷ್ಟ ನಷ್ಟಗಳು ಜೀವನದ ಯಾತನೆ, ಎಲ್ಲವನ್ನೂ ತನ್ನ ಅನುಭವಗಳೊಂದಿಗೆ ಮೇಳೈಸಿ ಒಂದು ಸ್ಪಷ್ಟ ರೂಪು ಪಡೆಯುವುದು ಕಾವ್ಯ. ವೈಭವೀಕರಣವಿಲ್ಲದೆ, ವಾಸ್ತವಿಕ ನೆಲೆಗಟ್ಟಿನಲ್ಲಿ ಸರಳವಾದರೂ ಧೀರ್ಘವಾದ ಆಲೋಚನೆಯನ್ನು ಮೂಡಿಸಿಕೊಳ್ಳುವಲ್ಲಿ ಮಹಿಳಾ ಕವಿತೆಗಳು ಯಶಸ್ವಿಯಾಗಿವೆ ಎನ್ನಬಹುದು.

ಆಧುನಿಕ ಮಹಿಳಾ ಕಾವ್ಯ ಕನ್ನಡ ಕಾವ್ಯ ಕ್ಷೇತ್ರದ ಏಕ ಮುಖವಾದ ಪುರುಷ ಪ್ರಜ್ಞೆಯ ಪ್ರವಾಹವನ್ನು, ಅದರ ದಿಕ್ಕನ್ನು ಒಂದಿಷ್ಟು ಬೇರೆಯ ಕಡೆಗೆ ಬದಲಿಸುವ ಪ್ರಯತ್ನ ಮಾಡಿದೆ ಎನ್ನಬಹುದು. ಸಮಕಾಲೀನ ಮಹಿಳಾ ಕಾವ್ಯವನ್ನು ನೋಡಿದಾಗ ಕವಿತೆ ಎಂಬುದು ಒಂದು ಸಾಹಿತ್ಯಿಕ ಹವ್ಯಾಸಕ್ಕಿಂತ ತಮ್ಮ ಮನಸ್ಥಿತಿಯನ್ನು ಪ್ರಕಟ ಪಡಿಸುವ ಅನಿವಾರ್ಯ ಮಾಧ್ಯಮವಾಗಿ ಬಂದಿದೆ. ಎಷ್ಟೋ ಕವಯತ್ರಿಯರು ಹೇಳಿಕೊಂಡಿರುವಂತೆ ಅವರು ಕವಿತೆ ಬರೆಯುವುದು ತಮ್ಮ ನೋವಿನ

ಒತ್ತಡಗಳಿಂದ ಬಿಡುಗಡೆ ಪಡೆಯಲು , ತಮ್ಮ ನೋವು ಹಾಗೂ ವಿಷಾದಗಳಿಗೆ ದನಿ ಕೊಡಲು, ತಾವು ಯಾರಿಗೂ ಹೇಳಿಕೊಳ್ಳಲಾಗದ ತಲ್ಲಣಗಳನ್ನು ಅನುಭವಗಳನ್ನು ಕವಿತೆಗಳ ರೂಪದಲ್ಲಿ ಹೊರಗೆಡಹಿದ್ದಾರೆ.

ಉದ್ಯೋಗಸ್ಥ ಮಹಿಳೆಯ ತಾಕಲಾಟ, ಅವಳ ಮನಸ್ಥಿತಿ, ಗ್ರಾಮೀಣ ಸಮುದಾಯದ ಹೆಣ್ಣುಮಗಳ ಜೀವನ ಸಮಾಜದೊಂದಿಗೆ ಸದಾ ಒಡನಾಡಿಯಾಗಿ ಬದುಕುತ್ತಿರುವ ಹೆಣ್ಣಿನ ಮನೋವೇದನೆ ಮುಂತಾದವುಗಳು ಕಾವ್ಯರೂಪ ಪಡೆದುಕೊಂಡಾಗ ಯಾವ ರೀತಿಯ ಆಲೋಚನೆಗಳಿಗೆ ಒಳಗು ಮಾಡುತ್ತವೆ ಎಂಬುದನ್ನು 75 ರ ನಂತರ ಬಂದ ಕವಿತೆಗಳಲ್ಲಿ ಗುರ್ತಿಸಬಹುದು. ಕೇವಲ ಸಂಸಾರಿಕ ಜೀವನವೇ ಅವಳಿಗೆ ಮುಖ್ಯವಲ್ಲ. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಹೆಣ್ಣಾದವಳು ತನ್ನನ್ನು ತಾನು ಹೇಗೆ ಗುರ್ತಿಸ ಬಯಸುತ್ತಾಳೆ ಮತ್ತು ತನ್ನೊಳಗಿನ ವ್ಯಕ್ತಿತ್ವವನ್ನು ಹುಡುಕ ಹೊರಡುತ್ತಾಳೆ ಎಂಬುದು ಎಲ್ಲಾ ಕವಿತೆಗಳಲ್ಲೂಕಂಡು ಬರುತ್ತದೆ. ಇದೆಲ್ಲಕ್ಕೂ ಕನ್ನಡ ಸಾಹಿತ್ಯದ ಕಾವ್ಯ ಮಾಧ್ಯಮ ಬಹಳ ಹತ್ತಿರವಾಗಿ ನಮ್ಮ ಲೇಖಕಿಯರಿಗೆ ಕಂಡು ಬಂದದ್ದು ಮುಖ್ಯ ಸಂಗತಿ.

ವಿವಾಹ, ಗಂಡು ಹೆಣ್ಣಿನ ಸಂಬಂಧ, ಸಮಾಜಿಕ ಕಳಕಳಿ , ಪುರಾಣದಲ್ಲಿನ ಪಾತ್ರಗಳು, ಪ್ರೀತಿ, ಪ್ರಣಯ, ವಿರಹ, ಸಂಸಾರ, ಬದುಕಿನಲ್ಲಿನ ನೋವು, ನಲಿವು ಹತಾಶೆ ಮುಂತಾದವುಗಳನ್ನು ತಮ್ಮ ಸಂವೇದನೆಗಳೊಂದಿಗೆ ಮೇಳೈಸಿಕೊಂಡು ಬರವಣಿಗೆ ರೂಪು ಪಡೆದಿದ್ದು ಬಹಳ ಸ್ವಾಗತಾರ್ಹ ಸಂಗತಿಯಾಗಿದೆ. ಆಧುನಿಕ ಲೇಖಕಿಯರಿಗೆ ಬಹಳ ಮುಖ್ಯವಾಗಿ ಕಂಡು ಬರುವ ಅಂಶವೆಂದರೆ ಪ್ರೀತಿಯೊಂದಿಗಿನ ಬದುಕು. ಎಲ್ಲಾ ಕವಿಯತ್ರಿಯರ ಆಲೋಚನೆಗಳಲ್ಲಿ ಭಿನ್ನತೆ ಕಂಡುಬಂದರೂ ಅವರ ಮೂಲಭೂತ ಕಾಳಜಿ ಹೆಣ್ಣೇ ಆಗಿರುವುದನ್ನು ಇಲ್ಲಿ ಗುರುತಿಸಬಹುದು.

**'ಪ್ರೀತಿ- ಪ್ರೇಮ- ಪ್ರಣಯ-ವಿರಹ'- ಕುರಿತು**

ಬದುಕಿನ ಆಗು ಹೋಗುಗಳಲ್ಲಿ ಒಂದು ಪ್ರಮುಖ ಹಂತವಾಗಿ ಇದನ್ನು ಗುರ್ತಿಸಬಹುದು. ಕಾವ್ಯ ಮಾಧ್ಯಮದಲ್ಲಿ ಪ್ರೀತಿ, ಪ್ರೇಮ, ಪ್ರಣಯ, ವಿರಹ ಮುಂತಾದ ಅಂಶಗಳು ಪ್ರಮುಖವಾಗಿ ಗುರ್ತಿಸಿಕೊಂಡಿವೆ. ಲೇಖಕ ಇದನ್ನು ಚಿತ್ರಿಸುವ ಬಗೆಗೂ, ಲೇಖಕಿ ಈ ಅಂಶಗಳನ್ನು ಚಿತ್ರಿಸುವ ಬಗೆಗೂ ಭಿನ್ನತೆ ಸಹಜವಾಗಿಯೇ ಕಂಡು ಬರುತ್ತದೆ. ಈ ಭಿನ್ನತೆ ಎಂಬುದು ಅವರ ಮನಸ್ಥಿತಿಯ ಅನುಭವ ಲೋಕಕ್ಕೆ ಸಂಬಂಧ ಪಟ್ಟಿದೆ. ಎನ್ನಬಹುದು. ಹೆಣ್ಣಾದವಳು ಗಂಡಿನ ಪ್ರೀತಿಯೊಂದಿಗೆ ಬದುಕನ್ನು ವಾಸ್ತವದ ನೆಲೆಗಟ್ಟಿನಲ್ಲಿ ಪರಿಪೂರ್ಣವಾಗಿಸಿಕೊಳ್ಳುವ ಕ್ರಿಯೆ ಸದಾ ಜಾಗೃತವಾಗಿರುವುದನ್ನು ನೋಡಬಹುದು.

ಮಾಲತಿ ಪಟ್ಟಣ ಶೆಟ್ಟಿಯವರ 'ಅಪರೂಪದ ಪ್ರೀತಿ ' ಕವಿತೆ , ಪ್ರೀತಿಯ ಆಶಯದ ಜೊತೆಗೆ ಅವ್ಯಕ್ತ ಶಕ್ತಿಯ ರೀತಿಯನ್ನು ಕವಿತೆಯ ಮೂಲಕ ಧ್ವನಿಸಿದ್ದಾರೆ.

ಇರು ನೀನಿರು

ಕಣ್ಣಂಚಲ್ಲಿ ಹೊಳೆವ ಮುತ್ತಾಗಿ

ಕಲ್ಪನೆಯ ತುಟಿಗೆ ಸದಾ ಮತ್ತಾಗಿ

ಕೈಗೆ ನಿಲುಕದ ಸೊತ್ತಾಗಿ

ನೆತ್ತಿಗೊಂದು ಧ್ರುವ ತಾರೆಯಾಗಿ

ಬಾಳ ಹೊತ್ತಿಗೆಯಾಗಿ

ಬತ್ತದ ಕಾವ್ಯ

ಗಂಗೆಯಾಗಿ



ಪ್ರೀತಿಯ ಸೆಳೆತ ಸಹಜವಾದುದಾದರೂ ಅದು ಬರುವಿಕೆಯ ಜಾಡು, ಕಾಯವಿಕೆಯ ಮನಸ್ಥಿತಿ, ಕಾಯುವಾಗಿನ ಹಂಬಲ, ತುಡಿತಗಳು ದೂರಾಗಿ, ಆ ಪ್ರೀತಿ ಒಡಲನ್ನು ಕಾತರಿಸಿ ಬಂದಾಗ ಅದನ್ನು ತಿರಸ್ಕರಿಸಿಸಲೂ ಆಗದೆ ಇರುವ ತಾಕಲಾಟ ಎಲ್ಲಾ ಹೆಣ್ಣುಗಳು ಮನಸ್ಥಿತಿಯನ್ನು ಒಟ್ಟಾರೆ ಬೆಸೆಯುವ ಕ್ರಮ ಇಲ್ಲಿದೆ. ಪ್ರೀತಿ ನಿರಂತರವಾದರೂ ಅದರ ಸೆಳೆದ ಕಡಿಮೆಯಾಗುತ್ತಾ ಬಂದಾಗ ಅದು ಹೇಗೆ ಅಪರೂಪದ ಪ್ರೀತಿಯಾಗಿ ಬರುತ್ತದೆ. ಮತ್ತು ಕಾವ್ಯಧಾರೆಯಾಗಿ ಜ್ವಲಿಸುತ್ತದೆ ಎಂಬುದು ಇಲ್ಲಿ ವ್ಯಕ್ತ ಗೊಂಡಿದೆ.

ಸಂದ್ಯಾ ರೆಡ್ಡಿಯವರ ' ಈ ಪ್ರೀತಿಯೊಳಗೆ' ಕವಿತೆಯ ಈ ಸಾಲುಗಳನ್ನು ನೋಡಬಹುದು "ನಲಿವಾಗಿ ನೋವಾಗಿ , ಚೆಲುವಾಗಿ, ಪರಿಮಳವಾಗಿ ಸಿಕ್ಕು ಕೂದಲ ಮೊಲ್ಲೆಯ ಮೊಗ್ಗಂತೆ ನೆನಪಾಗಿ ಬದುಕೆಲ್ಲಾ ಪಸರಿಸುವ ಈ ಪ್ರೀತಿಯ ಎಳೆಗಳು'' ಭಾವನೆಗಳು ಒತ್ತರಿಸಿಕೊಂಡು ಬರುತ್ತಿದ್ದರೂ ಕೆಲವೊಮ್ಮೆ ಕರಗಲೇ ಬೇಕಾದ ಪ್ರಸಂಗಗಳು ಒಂದು ಬಿಡುತ್ತವೆ. ಕೂದಲಲ್ಲಿ ಸಿಲುಕುವ ಮೊಲ್ಲೆಯ ಮೊಗ್ಗು ಪರಿಮಳ ಬೀರಿ ಬಾಡಿದಾಗ ಪರಿಪೂರ್ಣತೆ ಹೇಗೆ ಪಡೆಯುತ್ತದೆಯೋ ಹಾಗೆ ಈ ಪ್ರೀತಿಯೊಳಗೆ ಕಪ್ಪು ರಾತ್ರಿಗಳಲ್ಲಿ ಕನಸುಗಳೂ ಸಾಕಾರಗೊಳ್ಳುತ್ತವೆ. ಆ ಕಪ್ಪುರಾತ್ರಿಗಳು ಹೊಸದೊಂದು ಪ್ರಪಂಚವನ್ನು ಸೃಷ್ಟಿಸುವ ಕ್ರಿಯೆ ನಡೆಯುವಂತೆ ಮಾಡುತ್ತವೆ.

ಹೆಚ್.ಎಲ್. ಪುಷ್ಪರವರ ಪ್ರೇಮವೆಂದರೆ ಹೀಗೆ ಕವಿತೆ

ಪ್ರೀತಿಯೆಂದರೆ ಇಷ್ಟೇ

ಸುಮ್ಮನೇ ನಿರೀಕ್ಷೆ ತಲ್ಲಣಗಳಲ್ಲಿ ಮುಳುಗಿ

ಹುಡುಕಾಟ ಅನುಭವಗಳಲ್ಲಿ ಮಗ್ನವಾಗುವುದು

ಸಿಕ್ಕರೆ ತಲೆ ಎತ್ತಿ ಹೂ ನಗುವುದು

ಸಿಕ್ಕದಿದ್ದರೆ ಬಾಗಿ ವಿಷಣ್ಣಾವಾಗುವುದು

ವಾಸ್ತವತೆಯ ಪ್ರತಿಬಿಂಬ ಈ ಕವಿತೆಯಲ್ಲಿದೆ, ಪ್ರೀತಿಯಲ್ಲಿ ಸಿಲುಕಿ, ಅದು ಉರುಳಾಗಿ ಕಂಡರೂ ಅದು ವಸಂತದ ಚಿಗುರಿನಂತೆ ಸುಗಂಧ ಸೂಸುವ ಹೂಗಳು ಪ್ರೀತಿಯ ದನಿ ಕಳೆದುಕೊಂಡಾಗ ನಿರ್ಜೀವದಂತೆ ಕಂಡರೂ ನಿರೀಕ್ಷೆಗೆ ನೀರೆರೆಯುವವರು ಸಿಕ್ಕಾಗ ಅದು ತನಗೆ ತಾನೇ ಚಿಗುರೊಡೆಯುವುದನ್ನು ಕಾಣಬಹುದು. ಪ್ರೀತಿಯೊಂದಿಗೆ ಹುಡುಕಾಟದ ಕ್ರಿಯೆ ಸಾಮಾನ್ಯವಾಗಿ ಕಂಡು ಬಂದಿದೆ.

ಪುಷ್ಪಾ ಅವರ

'ಆಕೆ, ಅವನು, ಮತ್ತು ನದಿ'ಕವಿತೆಯ ಸಾಲುಗಳು

ಅವನಿಗೆ ಆ ನದಿಯ ತೀರಾ ಕಂಡಾಗಲೆಲ್ಲಾ

ಅವಳದೇ ನೆನಪು, ಅದರಂಥ ಸಮೃದ್ಧ ಸುಖ

ಅವಳ ನಡು ತೊಡೆಗಳಲ್ಲಿ

ಈ ನದಿ ಹುಟ್ಟಿ ಹರಿದಂತೆ

ತನ್ನನ್ನು ಸಿಕ್ಕಿಸಿದ ಹಾಗೆ ಈ ಆಳ ಸುಳಿಗಳಲ್ಲಿ

ತೇಲಿ ಮುಳುಗಿ, ಮುಳುಗಿ ತೇಲಿ

ಸಾಗಿದ ದೋಣಿಯಲ್ಲಿ ಇವನ ವಾಸ್ತವ.

ಹೆಣ್ಣಿನೊಂದಿಗೆ ಅನುಭವಿಸಿದ ಸುಖ ನದೀ ತೀರದ ಸಮೃದ್ಧತೆಯನ್ನು ಕಂಡಾಗ ಉಂಟಾಗುವ ಅಹ್ಲಾದತೆಯನ್ನು ನೆನಪಿಗೆ ತರುತ್ತದೆ. ಅವರಿಬ್ಬರ ಕೂಡುವಿಕೆ ಮನದ ತುಮುಲ ಉದ್ವೇಗಗಳು ನದಿಯ ಉಬ್ಬರ ವಿಳಿತ

ಓ ನದಿಯೇ ನಿನ್ನ ತೆರೆದ ಮೈಯೇ ಆಕೆ

ನಿನ್ನ ಉಬ್ಬರವಿಳಿತಗಳಲ್ಲಿ

ನೀ ನಕ್ಕು ಕುಣಿದವಳೇ ಆಕೆ

ತೆರೆದು ಹರಿದು ಸಾಗಿದ ವಿಸ್ತಾರದಿವಳು

ಕಾದಿದ್ದಾಳೆ ಅವಳು

ಹರಿದವಳು ಹೊಳೆಯಾಗಿ, ಅಲೆಯಾಗಿ

ಕಾದಿದ್ದಾಳೆ ನದಿಯೇ ನಿನ್ನಲ್ಲಿ , ನಿನ್ನಾಳದಲ್ಲಿ , ನಿನ್ನ ಸ್ಪರ್ಶದಲ್ಲಿ
ಬದುಕಿನೆದರು ಈ ಮುಖಾಮುಖಿಯಲ್ಲಿ

ಮಮತಾರವರ "ಪಾರಿಜಾತದ" ಪ್ರೀತಿ ಕವಿತೆ

ನಿಮಗೂ ತಿಳಿದಿದೆ ಪಾರಿಜಾತದ ಪ್ರೀತಿ
ಬೆಳಕ ಬೆನ್ನಿಗೆ ಏಳು ಬಣ್ಣ
ನಿಮ್ಮ ಕನಸನು ಬಿಟ್ಟು ಆಚೆ ಬಂದಿದ್ದೇವೆ.
ತಡೆಯಲಾರಿರಿ ಇನ್ನು ಅಡ್ಡಗಟ್ಟಿ

ಇರುಳು ಬೆಳಕಿನ ನಡುವೆ ಏಳು ಬಣ್ಣಗಳ ರೂಪದಲ್ಲಿ ಕಂಡು ಬರುವ ಪಾರಿಜಾತ ಹೂವು ಆಕರ್ಷಣೀಯವಾಗಿ ಕಂಡು ಬಂದರೂ ಅದು ಸಾಮಾನ್ಯ ಸ್ಥಿತಿಗೆ ಮರಳುತ್ತದೆ. ಪ್ರೀತಿಯ ಕನಸಿನಿಂದ ಹೊರ ಬಂದ ಮನಸ್ಸುಗಳಿಗೆ ಬೇಲಿ ಕಟ್ಟುವ ಪ್ರಯತ್ನ ಹುಚ್ಚು ಕಾಡಿಗೆ ಬೇಲಿ ಹಾಕಿದರೆ ಅದರ ವ್ಯಾಪ್ತಿಗೆ ಮಿತಿ ಎಂಬುದಿಲ್ಲ. ಬಂಧನದ ಬಿಡುಗಡೆ ಎಂಬುದು ಬೆಳಕಿನ ಏಳು ಬಣ್ಣಗಳಲ್ಲಿ ವರ್ಣಿತವಾದರೂ , ಕನಸಿನ ಪ್ರೀತಿಯಿಂದ ಆಚೆ ಬರುವ ಕ್ರಿಯೆ ಇಲ್ಲಿ ನಿರಂತರತೆಯನ್ನು ಸಂಚಿಸುತ್ತದೆ.

ಪ್ರೀತಿಯ ಜೊತೆಯಲ್ಲೇ ವಿರಹವೆಂಬುದು ಹೆಣ್ಣನ್ನು ಯಾವ ರೀತಿ ತಳಮಳಗೊಳಿಸುತ್ತದೆ. ಎಂಬುದನ್ನು ಅನೇಕ ಕವಿತೆಗಳಲ್ಲಿನೋಡಬಹುದು.

ಶಶಿಕಲಾರವರ ' ಪ್ರಿತಿಯ ಆರತಿ' ಕವಿತೆಯಲ್ಲಿ

ಎಲ್ಲೆಲ್ಲಿ ನೋಡಿದರೂ ನಲ್ಲನ ಸುಳಿವಿಲ್ಲ
ಯಾರಲ್ಲಿ ಹುಡುಕಿದರೂ ಹೆಜ್ಜೆಯ ಗುರುತಿಲ್ಲ
ಎಂಥಲ್ಲಿ ಕುಂತೀದಿ ಕೂಗಿದರೂ ದನಿಯಿಲ್ಲ
ಬಂದಿಲ್ಲಿ ನೋಡೆನ್ನ ಜೀವದಲಿಲ ಜೀವಿಲ್ಲ .
ಹಕ್ಕಾಗಿ ಹಾರುವೆನು ಬರುವೆನು ನಿನ್ನಲ್ಲೆ
ನಿನ್ನ ಕಣ್ಣೀನ ಪಣತ್ಯಾಗ ಬೆಳಕಾಗಿ ಬೆಳಗೇನು
ನಿನ್ನ ಪೀರೂತಿ ಆರತಿಯೊಳಗ ಕಳಸಾಗಿ ಹೊಳದೇನು.

ಒಲಿದವನ ಹುಡುಕುವಿಕೆ, ಅವನಲ್ಲೇ ತನ್ನ ಜೀವನದ ಪ್ರತಿಬಿಂಬವನ್ನು ಹೆಣ್ಣಾದವಳು ಸಹಜವಾಗಿ ಕಂಡುಕೊಳ್ಳುವ ಬಗೆ ಈ ಕವನ ತಿಳಿಸುತ್ತದೆ. ನಿಸರ್ಗದತ್ತವಾದ ಹಸಿರು , ನೇಸರ, ಗಿಳಿ ಮುಂತಾದವುಗಳು

ಅವಳಿಗೆ ಜೀವ ಚೈತನ್ಯಗಳಾಗಿವೆ. ತನ್ನ ನಲ್ಲನಲ್ಲೆ ಒಲಿದವಳು ಸಾರ್ಥಕ್ಯವನ್ನು ಪಡೆಯಬೇಕೆಂಬ ಬಯಕೆ ಆಕೆಯದು. ಇಲ್ಲಿ ವಿರಹ ಮುಖ್ಯವಾದರೂ ಒಂದು ಹೆಣ್ಣಿನಲ್ಲಿರಬೇಕಾದ ಮುಕ್ತತೆಯ ಭಾವ ಈ ಕವಿತೆ ಕಟ್ಟಿಕೊಟ್ಟಿದೆ. ಅಂತರಗಂದ ಒಳ ಜಗತ್ತಿನ ತುಡಿತವನ್ನು ಹೆಣ್ಣಾದವಳು ಗಂಡಿನಲ್ಲಿ ಹೇಗೆ ನೋಡುತ್ತಾಳೆ ಎಂಬುದು ಇಲ್ಲಿಮುಖ್ಯವಾಗಿ ಕಂಡು ಬರುತ್ತದೆ.

ಸಂಧ್ಯಾ ರೆಡ್ಡಿಯವರ "ಈಗ" ಕವಿತೆ

ಮರೆತ ಹಾಡಾದವು ಸುಂದರಗಳಿಗೆ
ಸುಟ್ಟ ಆಸೆಯ ಬೂದಿ ಹೃದಯದೊಳಗೆ
ನೆನಪುಗಳ ಮಹಾಪೂರ
ನೀರಿರದ ಕಾಲುವೆಯ ಕೊರಕಲೊಳಗೆ

ಬದುಕಿನಲ್ಲಿನ ನೀರವತೆ ಎದ್ದು ತೋರುತ್ತದೆ ಕೈಗೊಡದ ಆಸೆಗಳಿಗೆ ಕಣ್ಣೀರಿಡುವ ಬದಲು ನಕಲಿ ನಗೆ ದಾರಿದೀಪ ಎಂಬ ಮಾತು ಹೊಂದಿಕೆಯಾಗುತ್ತದೆ. ಬದುಕುವ ಆಸೆಗಳನ್ನು ಸುಟ್ಟು ಹೃದಯದಲ್ಲಿಡುವ ಕ್ರಿಯೆ ನಿರ್ಜೀವಸ್ಥಿತಿಯದು, ಬದುಕಿನಲ್ಲಿ ಆಸೆಯ ನದಿ ಬತ್ತಿದಾಗ ಒಂದು ಪುಟಿಯುವ ಚಿಲುಮೆ ನೋಡಲು ಸಾಧ್ಯವಿಲ್ಲ. ನೀರಿರದ ಕಾಲುವೆಯ ಕೊರಕಲೊಳಗೆ ನೆನಪುಗಳ ಮಹಾಪೂರವೇ ಹರಿದು ಬರುತ್ತಿರುವಾಗ ಜೀವಂತಿಕೆ ಎಂಬುದು ಗೌಣವಾಗಿದೆ. ಈಗ ಹೃದಯದ ಸಮಾಧಿ ಸ್ಥಿತಿ ಎಂಬುದು ಬದಲಾವಣೆಯ ಹಂತದಿಂದ ದೂರ ಸರಿದ ಬದುಕನ್ನು ಆವರಿಸಿದೆ ಎಂಬುದನ್ನು ನಿರ್ಲಿಪ್ತ ಭಾವದಿಂದ ನೋಡುವ ಬಗ್ಗೆ ಮುಖ್ಯವಾಗುತ್ತದೆ.

ಆ ಪ್ರೀತಿ ಎಂಬುದು ಹೇಗೆ ಎಲ್ಲರ ಮನಸ್ಥಿತಿಯೊಂದಿಗೆ ಭಿನ್ನವಾಗಿ ಕಂಡು ಬರುತ್ತದೆ ಎಂಬುದನ್ನು ಈ ಕೆಲವು ಉದಾಹರಣೆಗಳಿಂದ ತಿಳಿಯಬಹುದು ಇದು ಕೆಲವರಿಗೆ ಸ್ವಗತದ ಮಾದರಿಯಾದರೆ ಮತ್ತೆ ಕೆಲವರಿಗೆ ತಿಳುವಳಿಕೆಯ ಮಾದರಿಯಾಗಿದೆ.

**ದಾಂಪತ್ಯ :**

ಹೆಣ್ಣಿಗೆ ದಾಂಪತ್ಯವೆಂಬುದು ಬದುಕಿನ ಒಂದು ಮಹತ್ವದ ಹಂತ. ಕೈ ಹಿಡಿದ ಪುರುಷನೊಡನೆ ಇಡೀ ಬದುಕನ್ನು ಸಹಿಸಬೇಕಾದ ಹೆಣ್ಣಿಗೆ ಈ ದಾಂಪತ್ಯ ಸಂಬಂಧಗಳಲ್ಲಿನ ಸಂಕೀರ್ಣತೆಗಳು ಗೋಚರವಾಗತೊಡಗಿದಂತೆ ಅಸಹಾಯಕತೆ ಭ್ರಮನಿರಸನಗಳು ಕಾಡುತ್ತವೆ. ದಾಂಪತ್ಯವೆಂಬುದು ಹೆಣ್ಣು ಅಲಂಕರಿಸಬೇಕಾದ ಅನಿವಾರ್ಯ ಪೀಠ ಎನ್ನಿಸಿದರೂ ಅಲ್ಲಿಯೂ ಒಂದಿಷ್ಟು ತಂಪೆನ್ನಿಸುವ ಗಳಿಗೆಗಳು ಇದ್ದೇ ಇರುತ್ತವೆ. ಅದನ್ನು ಅಲ್ಲಗಳೆಯುವ ಮೂರ್ಖತನವನ್ನು ಹೆಣ್ಣು ಮಾಡುವುದಿಲ್ಲ.

ಬದಲಿಗೆ ಚಿಂತನೆ ವಿಮರ್ಶೆಗಳನ್ನು ಒಟ್ಟುಗೂಡಿಸಿಯೇ ಅವಳ ಬದುಕನ್ನು ಸಹನೀಯವಾಗಿಸಿ ಕೊಳ್ಳುತ್ತಾಳೆ. ದಾಂಪತ್ಯ ಕುರಿತಂತೆ ಹೆಣ್ಣಿನ ಅನಿಸಿಕೆಗಳನ್ನು ನವ್ಯ ಕವಯತ್ರಿಯರು ಸರೆ ಹಿಡಿದಿದ್ದಾರೆ.

ಮಾಲತಿಯವರು "ನಮ್ಮ ಹಾಡು" ಕವಿತೆಯಲ್ಲಿ

ಇವರಿಗಾಗಿ
ಅಂಧಃ ಕಾರವನ್ನೆತ್ತಿ
ಗಟ ಗಟನೆ ಕುಡಿದು
ಬೆಳಕು ನಿರಿಗೆಯ
ಚಿಮ್ಮಿ ನಡೆಯಬೇಕು
ಇವರಿಗಾಗಿ ನನ್ನ
ರಾತ್ರಿಗಳ ಕೊಟ್ಟು
ಕನಸುಗಳ ಕೊಟ್ಟು
ಕಣ್ಣನ್ನೇ ಕೊಟ್ಟು
ಅಂಧಳಾಗಬೇಕು.
ಇವರಿಗಾಗಿ ನನ್ನ
ಎಲ್ಲಾ ಸಮರ್ಪಣೆ ಮಾಡಿ
ಸುಟ್ಟು ಇಲ್ಲವಾಗುತ್ತ
ಸತ್ತುಸಾಯಲು ಮತ್ತೆ
ಹುಟ್ಟಬೇಕು. ಸೀತಾ ಸಾವಿತ್ರಿ
ಪಟ್ಟ ಪಡೆಯಬೇಕು.

ಪುರುಷನ ದೋರಣೆಗೆ ಪ್ರತಿಯಾಗಿ ಹೆಣ್ಣಿನ ಸ್ಥಿತಿಗತಿಗಳ ಒಂದು ಚಿತ್ರಣ ಇಲ್ಲಿದೆ. ಬಂಧನ ಮತ್ತು ಹೆಣ್ಣಿನ ಅಸಹಾಯಕತೆಗಳು ಪ್ರಧಾನವಾಗಿ ಕಂಡು ಬರುತ್ತವೆ. ಸಮಾಜ ನಿರ್ಧಾರಿತ ಮೌಲ್ಯಗಳಿಗೆ ಒಪ್ಪಿಗೆಯಾಗುವಂತೆ ನಡೆದುಕೊಳ್ಳುವಂತೆ ತನ್ನ ತನವನ್ನು ಬಲಿಕೊಡುವಾಗಿನ ಮಗಿನ ಸಂಕಟ ಬಹುತೇಕ ಕವಯತ್ರಿಯರ ಕವಿತೆಗಳಲ್ಲಿ ವ್ಯಕ್ತವಾಗಿವೆ.

ಪ್ರತಿಭಾರವರ "ಕೇರ್ ಫ್ರೀ ಮಹಿಳೆಯರು"

ಕಾಮನ ಬಿಲ್ಲಿನ ಹಿಂದೆ ಓಡುವವರಿಗೆ
ದಣಿವಿಲ್ಲ ನಿಂತಲ್ಲೇ ಸುತ್ತು ಹೊಡೆಯುತ್ತಾ
ಒಂದೇ ಮೆಟ್ಟಿಲನ್ನು ಏರಿ ಇಳಿಯುತ್ತಾ
ಸೂಪರ್ ಬಜಾರಿನ ಸಾಲುಗಳ ನಡುವೆ
ಕೇರ್ ಫ್ರೀ ಮಹಿಳೆಯರು ಕಳೆದು ಹೋಗುತ್ತಾರೆ
ಇಪ್ಪತ್ತೈದು ರೂಪಾಯಿಯ ನೈಟಿಗಳಲ್ಲಿ
ವ್ಯಾನಿಷಿಂಗ್ ಕ್ರೀಮುಗಳಲ್ಲಿ ಮಾಯವಾಗುತ್ತಾರೆ
ಹೊರಗೆ ಜೇಬಲ್ಲಿ ಕೈ ಇಳಿ ಬಿಟ್ಟು
ಆಕಳಿಸುತ್ತಾ, ಆಚೀಚೆ ಕಣ್ಣಾಡಿಸುವ
ಗಂಡಂದಿರು ಇವರಿಗಾಗಿ ಕಾಯುತ್ತಾರೆ.

ದಾಂಪತ್ಯವು ಹೆಣ್ಣಿನ ವೈಯಕ್ತಿಕ ಆಸೆ ಆಕಾಂಕ್ಷೆಗಳಿಗೆ ತಿಲಾಂಜಲಿ ಕೊಡುವಂತೆ ಮಾಡುತ್ತದೆ. ಅವರು ತನ್ನ ತನ್ನತನವನ್ನೆ ಮರೆಯಬೇಕಾಗುತ್ತದೆ. ಎಂಬುದು ಇಲ್ಲಿ ಸಮರ್ಥವಾಗಿ ಚಿತ್ರಿತಗೊಂಡಿದೆ. ಬದುಕನ್ನು ತೀವ್ರವಾಗಿ ಹಂಬಲಿಸುವ ಹೆಣ್ಣು ಎಲ್ಲವನ್ನು ಸಹಿಸಿ ಬದುಕುವ ಕ್ರಮ ಇಲ್ಲಿ ಮುಖ್ಯವಾಗಿ ಕಂಡುಬಂದಿದೆ.

ಸಂಧ್ಯಾರವರ "ಓ ನನ್ನ ಚೇತನ "
ಮತ್ತು "ನಾವು" ಎಂಬ ಕವಿತೆಗಳಲ್ಲಿ ವ್ಯಕ್ತವಾಗಿದೆ.

ಮೂರು ಕಾಸಿನ ಖರ್ಚು ಮಾಡಿ ಕಟ್ಟಿದ ಮನೆ
ಹಾವಾಗಿ ಸುತ್ತಿಕೊಳ್ಳುವ ಸಂಬಂಧಗಳು
ಕೋಪದ ದಳ್ಳುರಿ
ಅಸಹಾಯಕತೆಯ ಮಿಡುಕು
ಅಷ್ಟಿಷ್ಟು ನಗೆ ಆವಿಹೊಗೆ
ಕಳೆದು ಬಿಡುವುದೆ ಬದುಕು - ಓದುವ ಮೊದಲೇ
ಗಾಳಿಗೆ ಮಗುಚಿದ ಪುಟದ ಹಾಗೆ

"ನಾವು " ಕವಿತೆ

ಇಚ್ಛೆಯನ್ನರಿತು ನಡೆವ ಪತಿ

ಮುತ್ತಿನಂತ ಮಕ್ಕಳು

ಬೆಚ್ಚನೆಯ ಮನೆ ಬೇಕೆಂದೇ

ಬೇಕೆಂದೇ ಸವೆದ ಜಾಡು ಹಿಡಿದವವರು

........................

ಪ್ರೀತಿ ಒರತೆಯ ಜೀವಂತವಾಗಿಟ್ಟು

ಬೇಡವಾದ ಬದುಕನ್ನು ಪಲ್ಲವಿಸಿ ಸುಖಿಸಿದವರು

**ಬದುಕನ್ನು ಕುರಿತು :**

ಬದುಕನ್ನು ಹೆಣ್ಣಾದವಳು ಹೇಗೆ ನೋಡುತ್ತಾಳೆ ತನ್ನ ಬದುಕಿನೊಂದಿಗೆ ಮತ್ತೊಬ್ಬರ ಬದುಕನ್ನು ನೋಡುವ ಕ್ರಮ ಅವಳಿಗೆ ಹೇಗೆ ಸಾಧ್ಯವಾಗುತ್ತದೆ ಎಂಬುದು ಕುತೂಹಲಕರ ಅಂಶ. ಆ ಬದುಕಿನೊಂದಿಗೆ ಹೆಣ್ಣಿನ ಅಂತರಂಗ ಯಾವ ರೀತಿ ತೆರೆದಿಡುತ್ತಾ ಹೋಗುತ್ತದೆ. ಎಂಬುದನ್ನು ಹಲವು ಕವಿತೆಗಳಲ್ಲಿ ಕಾಣಬಹುದು.

ಪ್ರತಿಭಾರವರ 'ಮರೀಚಿಕೆ' ಕವಿತೆಯಲ್ಲಿ

ಆವಿ ಮೋಡದ ಚಿತ್ತಾರದ ನೀಲಿ ಸೆರಗು

ಹಾಸಿ ಬಯಲಲ್ಲಿ ಬರಿ ಹಸಿರು ತುಂಬಿ

ಫಲವತೀ ಪೃಥ್ವಿ ಹಿಡಿಯೇ ನನ್ನ ಮನ

ಮಿಡಿಯೇ ಈ ಜಡವ ತೊಡಿಯೇ

ಎಂದು ಬಯಸಿದ ನನ್ನ ಬಯಕೆಗಳು

ಸುಡಲಿ ನಾನು ಬಯಸಿದಂತೆ

ಕನಸುಗಳ ಬೂದಿ ಹಾರಿ ತೇಲಲಿ

ನನ್ನ ಸುಟ್ಟು ಭಸ್ಮವಾಗಿಸಿದಂತೆ

ಬಯಸಿದ ಬಯಕೆಗಳು ಕನಸುಗಳಾದಾಗ ಬದುಕಿನಲ್ಲಿ ಹೇಗೆ ನಿರಾಶೆ ಎಂಬುದು ಸಹಜವಾಗುತ್ತದೋ ಹಾಗೆ ಕೇವಲ ಕನಸುಗಳೇ ಬದುಕಲ್ಲ ಎಂಬುದು ಮುಖ್ಯವಾದ ಅಂಶ. ತನ್ನನ್ನು

ತಾನು ಸುಟ್ಟುಕೊಂಡರೂ ಸಹ ಬದುಕಿನ ಬಗೆಗಿರುವ ಅದಮ್ಯ ಜೀವನೋತ್ಸಾಹವೆಂಬುದು ಎಂದಿಗೂ ಕಡಿಮೆಯಾಗಬಾರದು . ಆ ಒಂದು ತುಡಿತ ಸದಾ ಎಚ್ಚರದ ಸ್ಥಿತಿಯಲ್ಲಿದ್ದರೆ ಬದುಕಿನ ಪರಿಪೂರ್ಣತೆ ಎಂಬುದು ಸಾರ್ಥಕವಾಗುತ್ತದೆ.

ಪ್ರತಿಭಾ ಅವರ " ನಾವು ಹುಡುಗಿಯರೇ ಹೀಗೆ".... ಎಂಬ ಕವಿತೆ ಬದುಕು , ಪ್ರೀತಿ, ಸಂಸಾರವನ್ನು ಒಟ್ಟಾರೆಯಾಗಿ ಬೆಸೆದಂತ ಕವಿತೆಯಾಗಿದೆ. ಇಲ್ಲಿ ಎಚ್ಚರದ ಪ್ರಜ್ಞೆ ಪ್ರಮುಖವಾಗಿದೆ.

ನಾಲ್ಕು ವರ್ಷಗಳಲ್ಲಿ ವಿಪರೀತ ದಪ್ಪಗಾಗಿ
ಕೈಗೊಂದು ಕಾಲಿಗೊಂದು ಮಕ್ಕಳಾಗಿ
ಏದುಸಿರು ಬಿಡುತ್ತಾ ತರಕಾರಿ ಕೊಳ್ಳುವಾಗ
'ಅವನು' ಸಿಗುತ್ತಾನೆ
ನಮ್ಮ ಇಂದಿನ ಅವಸ್ಥೆಗೆ ಇವನೇ ಕಾರಣ
ಅಂತ ರೋಷ ತಾಳುತ್ತೇವೆ.
ಆದರೆ ಮೇಲೆ ನಗುತ್ತ ಅವನ
ಹೆಂಡತಿ ಮಕ್ಕಳಯೋಗ ಕ್ಷೇಮ ವಿಚಾರಿಸುತ್ತೇವೆ
ಯಾಕೆಂದರೆ ಅವಳದೂ ಅದೇ ಕಥೆಯಲ್ಲವೇ?
ನಾವು ಹುಡುಗಿಯರೇ ಹೀಗೆ....

ಈ ಕವಿತೆ ಎಲ್ಲ ತಲೆಮಾರುಗಳ ಹೆಣ್ಣಿನ ಒಳ ಮನಸ್ಸಿನ ಅಂತರಂಗವನ್ನು ತಾನಾಗಿಯೇ ಬಿಡಿಸಿಕೊಡುತ್ತದೆ. ಗೆಳತಿಯೊಂದಿಗೆ ತಮ್ಮ ಭಾವನೆಯನ್ನು ಹಂಚಿಕೊಳ್ಳುವ ಮನಸ್ಥಿತಿ ಎಲ್ಲಾ ಹೆಣ್ಣುಗಳಿಗೂ ಇರುವುದು ಸಮಾನ್ಯ ಸಂಗತಿ. ಹೆಣ್ಣಿನ ಸೂಕ್ಷ್ಮ ಸಂವೇದನೆಗಳ ಜಗತ್ತನ್ನು ಬೇಧಿಸುವ ಕ್ರಿಯೆ ಇಲ್ಲಿದೆ. ಹೆಣ್ಣಿನ ಸಹಜ ಆಸೆ, ಆಕಾಂಕ್ಷೆ, ಲಜ್ಜೆತನ ಸಿಟ್ಟು ಮುಂತಾದವುಗಳು ಅನಾವರಣಗೊಳ್ಳುವ ಬಗೆ ಸಹಜವಾಗಿ ಕಂಡು ಬಂದಿದೆ. ಪ್ರಿಯನೊಂದಿಗಿನ ಪ್ರೀತಿಯನ್ನು ಗಂಡನಲ್ಲಿ ಹುಡುಕುವ ಕ್ರಿಯೆ ಎಂಬುದು ನಿರಂತರವಾದುದು. ಸೀಮಿತತೆಗೆ ಒಳ ಪಡುವಂತದಲ್ಲ. ಮನದ ಆಲೋಚನೆಗಳನ್ನು ಹಿಟ್ಟು ಒತ್ತಿದಂತೆ ಒತ್ತುವ ಕ್ರಿಯೆ ಅದು ಅರಳುವ ಮುಂಚೆಯೇ ಒಂದು ಹರಳಾಗಿ ಪುಟಿಯುವ ರೂಪ ಮಿಂಚಿಹೊದ ಕಾಲವನ್ನು ಸೂಚಿಸುತ್ತದೆ. ಇಲ್ಲಿ ಭಾವುಕತೆಗಿಂತ ವಾಸ್ತವದ ಸೂಕ್ಷ್ಮತೆ ಸದಾ ಎಚ್ಚರದಿಂದ ಕೆಲಸ ಮಾಡಿದೆ ಎನ್ನಬಹುದು.

ಸಂಧ್ಯಾರವರ "ನಾವು" ಕವಿತೆ

ಕನಸುಗಳ ಬೆಳಕಲ್ಲಿ
ವಾಸ್ತವದ ಕತ್ತಲೆಯ ದಾಟಿದವರು
ಪ್ರೀತಿ ಒರತೆಯ ಜೀವಂತವಾಗಿಟ್ಟು
ಬೇಡವಾದ ಬದುಕನ್ನು ಪಲ್ಲವಿಸಿ ಸುಖಿಸಿದವರು

ಇರುವುದೆಲ್ಲವ ಬಿಟ್ಟು ಇರದುದರ ಕಡೆಗೆ ಜೀವನ ಎಂಬ ಮಾತನ್ನು ಈ ಸಾಲುಗಳು ನೆನಪಿಗೆ ತರುತ್ತದೆ. ಇಚ್ಛೆಯನರಿಯುವ ಪತಿ, ಮುತ್ತಿನಂತ ಮಕ್ಕಳು ಬೇಕೆಂದು ನಮ್ಮ ತಾಯಂದಿರು ನಡೆದ ಹಾದಿಯನ್ನು ಎಲ್ಲಾ ಹೆಣ್ಣುಗಳು ಬಯಸುವುದನ್ನು ನೋಡುತ್ತಿದ್ದೇವೆ. ಮುಂದಿರುವ ಕನಸುಗಳ ಬೆಳಕು ಬದುಕಿನ ವಾಸ್ತವವನ್ನು ಮರೆ ಮಾಚುತ್ತದೆ.

ದು. ಸರಸ್ವತಿಯವರ 'ಜೀವವಾಗೋ ಬಯಕೆಯಲಿ' ಕವಿತೆ ಬದುಕಿನ ಅದಮ್ಯ ಆಸೆ ಪುಟಿಯುವ ರೀತಿಯಲ್ಲಿ ಚಿತ್ರಿತಗೊಂಡಿದೆ.

ಆವಳ ಬುಡ ಅಲ್ಲಾಡಿಸಿ ಕೇಳಿತು
ಗರುಕೆ - ಏಯ್ ಹುಡುಗಿ
ಹೊಳೆಯಲ್ಲವದೊಂದು ಕಂದಕ
ಇಕ್ತನೋಡೆ
ವನವೆಂಬೋವನ
ಜೀವವೆಂಬೋ ಬಿಲದೊಳಗೆ
ಜಾಲಾಡಿ ಹುಡುಕು
ನಿನ್ನ ಬಿಡುಗಡೆಯ
ಹುಡುಗಿ - ಹೇಗೆ ಬರಲಿ?
ಗರುಕೆ - ಹಗುರಾಗಿ ಹಾರಿಬಾ
ಇಲ್ಲ
ಬಿದ್ದು ಗುದ್ದಾಡಿ ಬಾ.

ಸಮಾಜದಲ್ಲಿನ ಕ್ರೌರ್ಯ, ಅರಮನೆಯಲ್ಲಿ ಎಲ್ಲಾ ಸೌಕರ್ಯಗಳಿದ್ದರೂ ಒಂಟಿಯಾದ ಹೆಣ್ಣು ಬದುಕಿಗಾಗಿ ಹಾತೊರೆದು ಬಿಡುಗಡೆಯ ಪ್ರಪಂಚ ಬಯಸಿದಾಗ ಹೊಸಕಿದಷ್ಟು ಮತ್ತೆ ಮತ್ತೆ ಚಿಗುರುತ್ತಾ ಬರುವ ಗರಿಕೆ ಹಗುರಾಗಿ ಹಾರಿ ಬಾ, ಇಲ್ಲ ಬಿದ್ದು ಗುದ್ದಾಡಿ ಬಾ ಎಂಬ ಮಾತು ಹೆಣ್ಣಿನ ಸುತ್ತಲಿನ ದಾಸ್ಯದ

ಸಂಕೋಲೆಯನ್ನು ಬಿಡಿಸಿಕೊಂಡು ಬರುವಾಗಿನ ಹಂಬಲ ಮತ್ತು ಛಲಗಾರಿಕೆ ಇದರಲ್ಲಿ ವ್ಯಕ್ತವಾಗಿದೆ. ಜೀವ ಚೈತನ್ಯ ವೆಂಬುದು ಗರಿಕೆಯ ಮೂಲಕ ಕಂಡು ಬಂದಿದೆ. ಚಿಗುರುವ ಕ್ರಿಯೆ ಬದುಕಿನಲ್ಲಿ ಆಸ್ವಾದಿಸುವ ರೀತಿ ಇಲ್ಲಿ ಮುಖ್ಯವಾದುದಾಗಿದೆ. ಹೊಸದೊಂದು ದೃಷ್ಟಿಕೋನದಿಂದ ಬದುಕನ್ನು ನೋಡುವ ಕ್ರಮ ಇಲ್ಲಿದೆ.

ಬದುಕನ್ನು ನೋಡುವ ಕ್ರಮದಲ್ಲಿ, ದೃಷ್ಟಿಕೋನದಲ್ಲಿ ಭಿನ್ನತೆ ಇದ್ದರೂ ಅದರ ಮೂಲದಲ್ಲಿ ಬದುಕಿನ ಪ್ರೀತಿ ಹಾಗೂ ಹೆಣ್ಣಿನ ಸಹಿಷ್ಣುತೆ ಗಳು ಒಂದೇ ಸಮನಾಗಿರುವುದು ಗಮನಾರ್ಹ.

**ಪೌರಾಣಿಕ ಪಾತ್ರಗಳ ಪುನರ್ ವಿಮರ್ಶೆ :**

ಪುರಾಣ ಮಹಾಕಾವ್ಯಗಳಲ್ಲಿ ರೂಪಿತಗೊಂಡ ಸ್ತ್ರೀ ಹಾಗೂ ಪುರುಷ ಪಾತ್ರಗಳನ್ನು ಮರು ವಿಮರ್ಶೆಗೆ ಒಳಪಡಿಸುವ ಕೆಲಸ 75 ರ ನಂತರ ಬಂದ ಲೇಖಕಿಯರಲ್ಲಿ ವಿಶೇಷವಾಗಿ ನಡೆಯಿತು. ಪುರುಷ ಪಾತ್ರಗಳ ದ್ವಂದ್ವ ನಿಲುವು ಮತ್ತುಯಜಮಾನಿಕೆಗಳು ಆಧುನಿಕ ಲೇಖಕಿಯರಲ್ಲಿ ಜಾಗೃತ ಪ್ರಜ್ಞೆಯೊಂದಿಗೆ ವಿಡಂಬನೆಗೊಳ್ಳುತ್ತಾ ವಿಮರ್ಶೆಗೆ ಒಳ ಪಟ್ಟ ಸಂಗತಿ ಬಹಳ ಮುಖ್ಯವಾಗಿದೆ.

ಸೀತೆ, ಸಾವಿತ್ರಿ, ಊರ್ಮಿಳೆ, ಅಹಲ್ಯೆ ,ಅಮೃತಮತಿ ಮೊದಲಾದವರ ವ್ಯಕ್ತಿತ್ವಗಳು ಕವಯತ್ರಿಯರ ಮನದಾಳದಲ್ಲಿ ಹೊಸ ಪ್ರಶ್ನೆಗಳನ್ನು ಎಬ್ಬಿಸಿವೆ. ಆ ಪಾತ್ರಗಳು ಪ್ರತಿನಿಧಿಸಿದ ಮೌಲ್ಯಗಳು, ಅವರು ತಳೆದ ನಿಲುವುಗಳು , ಅವರ ಸಂಕಟ ಅಸಹಾಯಕತೆಗಳು ಕವಿಯತ್ರಿಯರ ಬರವಣಿಗೆ ಯಲ್ಲಿ ಮರುದನಿಸಿವೆ. ಪ್ರತಿಯೊಬ್ಬ ಕವಯತ್ರಿಯೂ ಪುರಾಣ ಮಹಾಕಾವ್ಯ ಗಳ ಸ್ತ್ರೀಯರನ್ನು ಕುರಿತು ತನ್ನ ನಿಲುವನ್ನು ವ್ಯಕ್ತ ಪಡಿಸಿದ್ದಾಳೆ.

ಪ್ರತಿಭಾ ನಂದಕುಮಾರ್ ರ "ನತ್ತು" ಕವಿತೆ ಪಂಚ ಪಾಂಡವರ ಪತ್ನಿ ದ್ರೌಪದಿಯ ಅಸಹಾಯಕತೆಯನ್ನು ಅತ್ಯಂತ ಸೂಕ್ಷ್ಮವಾಗಿ ಚಿತ್ರಿಸಿದೆ.

ಪೌರಾಣಿಕ ಪಾತ್ರವನ್ನು ವಾಸ್ತವದೊಂದಿಗೆ ಸಮೀಕರಿಸಿ ನೋಡುವ ದೃಷ್ಟಿ ಕೋನ ಇಲ್ಲಿದೆ. ಪಂಚ ಪಾಂಡವರಿಗೆ ಹೆಂಡತಿಯಾದವಳ ಸ್ಥಾನ ಭದ್ರವಾಗಿತ್ತು ಅನ್ನಿಸಿದರೂ ಒಂದು ಸ್ಥಿತಿಯ ಅಭದ್ರತೆ ಕಂಡು ಬಂದಿದೆ. ಪುರುಷ ನೆಲೆಗಟ್ಟಿನ ಕ್ರೌರ್ಯ, ಹೆಣ್ಣಿನ ಅಸಹಾಯಕತೆ, ದ್ರೌಪತಿ ಆದಿಯಾಗಿ ಇಂದಿಗೂ ಮುಂದುವರೆದುಕೊಂಡು ಬಂದಿದೆ. ಕಾಲ ಬದಲಾಗಿಯೇ ಹೊರತು ಪಾರಂಪರಿಕವಾದಂತಹ ಸಮಸ್ಯೆಗಳು ಅದೇ ಜಾಡನ್ನು ಹಿಡಿದ ಬಗೆಯನ್ನು ದ್ರೌಪದಿ ಪಾತ್ರದ ಮೂಲಕ ಬಿಂಬಿಸಿದ್ದಾರೆ. ಅವಳ ಪಾತ್ರದ ಜೊತೆಗೆ ಎಲ್ಲಾ ಹೆಣ್ಣುಗಳ ಮನಸ್ಥಿತಿ ಮತ್ತು ಸ್ಥಾನ ಮಾನವನ್ನು ಒಟ್ಟಾರೆಯಾಗಿ ಕಲೆ ಹಾಕಿ ನೋಡುವ ಪ್ರಯತ್ನ ಇಲ್ಲಿ ಮುಖ್ಯವಾಗಿ ಕಂಡು ಬರುತ್ತದೆ.

ಐವರೆದೆಗೊರಗಿ ಮುಡಿಕೆದರಿ
ಸಿಕ್ಕು ಸಿಕ್ಕಾಗಿ ಹೇಗೆಂದರೆ  ಹಾಗೆ ಹಾರಾಡುತ್ತಿರುವಾಗ
ನಿನ್ನ ಮೂಗು ನತ್ತು ಮಾತ್ರ ಹೇಗೆ ಮಿಂಚುತ್ತಿತ್ತು
ಕಣ್ಣಲ್ಲಿ  ಸಂತೃಪ್ತಿ  ಹೊಳೆಯುತ್ತಿತ್ತು
ಏಳು ಬೀಳುಗಳನೆಲ್ಲ ದಾಟಿ ಕೊನೆಗೆ
ನೀ ಗೆದ್ದು ಗದ್ದುಗೆಯ  ನೇರಿ  ರಾರಾಜಿಸುತ್ತಿರಲು
ಈಗ ನತ್ತಿನ ಕಟ್ಟಡ ಸಡಿಲಿ ಮುತ್ತು ಕಳಚಿ  ಬಿತ್ತೆಂದು  ಹಳ ಹಳಿಸುತ್ತ
ಇಲ್ಲೇನ  ಹುಡುಕುತ್ತಿದ್ದೀ ದ್ರೌಪದೀ?

**ಶಶಿಕಲಾರವರ ' ಸಾವಿಲ್ಲದಶನಿ' ಕವಿತೆ**

ಭಗ್ನಗೊಂಡ  ಕನಸುಗಳ  ಗೊಂಡಾರಣ್ಯದಲ್ಲಿ
ತಿರು ತಿರುಗಿ ಸುಸ್ತಾದ  ದಮಯಂತಿ
ನಿದ್ದೆಗಿಳಿದಾಗ
ಇದ್ದೊಂದು  ಸೀರೆಯಲ್ಲಿ ಸುತ್ತಿದರ್ಧವನು
ಕದ್ದೊಯ್ದ ಗಂಡ!
ಇವಳು ದೂರ ಬೇಕು  ಯಾರಿಗೆ?
ದಿಕ್ಕು ಯಾರೀ ನಾರಿಗೆ?

ದಮಯಂತಿ  ಸೀತೆ , ಸಾವಿತ್ರಿ, ದ್ರೌಪದಿ ಮುಂತಾದವರು  ಕಷ್ಟ ಅನುಭವಿಸಿದರೂ  ಸಹ ಪಾತಿವ್ರತ್ಯದ  ಸ್ಥಾನದಲ್ಲಿದ್ದು  ಪೂಜನೀಯರಾಗಿದ್ದಾರೆ. ಆದರೆ ಅವರ  ಸಂಕಟ  ತಳಮಳಗಳ  ವೇದನೆ ಚರಿತ್ರೆಯಿಂದ ದೂರ ಉಳಿದಿವೆ. ಅವನ್ನು ಇಂದಿನ  ಪ್ರಸ್ತುತತೆಗೆ ಒಳಪಡಿಸಿ ನೋಡಿದಾಗ  ಯಾವ ರೀತಿಯ ದೃಷ್ಟಿಕೋನ ಮೂಡುದತ್ತದೆ ಎಂಬುದು ಮುಖ್ಯವಾಗುತ್ತದೆ.

ಹಾಡ ಹಗಲ ನಡು ಬೀದಿಯಲ್ಲೇ
ಸಿಕ್ಕುವ ಕಣ್ಣುಗಳ  ನಡುವೆ
ಸಿಕ್ಕ ಅಕ್ಕಂದಿರ  ಸೆರಗ ಎಳೆಯುತ್ತ

ಬಿಕ್ಕಳಿಕೆಯ ಕಡೆಗಣಿಸಿದ ಈ
ದುಸ್ವಪ್ನದ ನಡುವೆ ದುಶ್ಯಾಸನನ
ಅಟ್ಟಹಾಸವಿನ್ನೂ ಕೇಳುತಿದೆ ನಮಗೆ
ಸೆರಗಿರುವುದೇ ತನಗೆ ಹಾಸಲು
ಎಂದು ಕೊಂಡೇ ಹುಟ್ಟಿ
ಅದರ ಮರೆಯಲ್ಲಿ
ಎದೆ ಹಾಲು ಹೀರಿ ಬೆಳೆದ
ಈ ಶನಿ ಸಂತಾನಕ್ಕೆ ಮಾತ್ರ ಸಾವಿಲ್ಲ !

ಪುರಾಣ ಪಾತ್ರಗಳಲ್ಲಿ ಅದೆಷ್ಟೋ ಹೆಣ್ಣುಗಳು ನಲುಗಿದ ಕ್ರೂರತೆ ಇಲ್ಲಿದೆ. ಮಹಾ ಕಾವ್ಯಗಳ ಒಟ್ಟಾರೆ ಪಾತ್ರಗಳ ಸಮೀಕರಣದಿಂದ ಒಂದೊಂದು ಪಾತ್ರಗಳ ಒಳಅರ್ಥಗಳನ್ನು ತಿಳಿದುಕೊಳ್ಳಬಹುದು.

**ಹೆಚ್. ಎಲ್. ಪುಷ್ಪಾರವರ ಅಮೃತ ಮತಿಯ "ಸ್ವಗತ" ಕವಿತೆ**

ತೆರೆದ ಬಾನೆದುರಲ್ಲಿ
ಮೃದು ಮೈಯ ಮಾಂಸದಬೆಯಲ್ಲಿ
ಉಳಿದ ಭಾವಗಳೆಷ್ಟು,ತೇಲಿ ಹೋದವೆಷ್ಟು?
ಹಸಿ ಹಸಿ ಕಾಡು ಪೊದೆಯ ಪೊದರುಗಳಲ್ಲಿ
ಮುಲುಕುವವು ರಾಗಗಳು ತೇಕುವುವು ಹಸಿವೆಗಳು
ಸತ್ತು ಸೊರಗುವುವು ಹಸನಾದ
ನಿನ್ನ ನಗುವಿನೆದರು ಹಸಿವಿದ್ದು

ವೈಭವೀಕೃತ ನೆಲೆಯಲ್ಲಿ ಚಿತ್ರಿತಗೊಂಡ ಅಮೃತಮತಿ ಸ್ತ್ರೀ ಸಹಜವಾದಂತಹ ನೆಲೆಗೆ ಒಳಪಟ್ಟಾಗ ನೋಡುವ ನೋಟವೇ ಬೇರೆಯಾಗಿ ಕಂಡು ಬರುತ್ತದೆ ಈ ಸ್ಥಿತಿ ಅಂದಿನ ಅಮೃತ ಮತಿಗೆ ಮಾತ್ರ ಸೀಮೀತಗೊಂಡಿಲ್ಲ ಎಂಬುದು ಗಮನಾರ್ಹವಾದುದಾಗಿದೆ.

ನಾವು ಜನ್ಮವೆತ್ತುತ್ತಲೇ ಇದ್ದೇವೆ

ಅಮೃತ ಮತಿಯರಾಗಿ

ನಿನ್ನಂತ ಗದ್ದುಗೆಯ ರಾಣಿಯರಾಗಿ

ಅವನು ಬದಗನಾಗಿ

ನಮಗುತ್ತರವಾಗಿ

ಜನ್ನನಿಂದ ಚಿತ್ರಿತಗೊಂಡ ಅಮೃತ ಮತಿ ತನ್ನ ಕಾಮುಕತೆಗಾಗೇ ಬದಗನನ್ನು ಕೂಡಿದ ಸಂದರ್ಭ ನೋಡಬಹುದು ಆ ಕಾಲದ ಅಮೃತ ಮತಿಯನ್ನು ಇಂದೂ ಸಹ ಒಂದು ಸೌಂದರ್ಯದ ಸಂಕೇತವಾಗಿ ನೋಡುವ ಜನತೆಗೆ ಅವಳ ಅಂತರಂಗದ ಒಳ ದನಿ ಮರೆ ಮಾಚಿಕೊಳ್ಳುತ್ತದೆ. ಆದರೆ ಮಹಿಳಾ ಕಾವ್ಯ ಮಾತ್ರ ಈ ಅಂತರಂಗದ ದನಿಗಳನ್ನು ಕೇಳಿಸವ ಕೆಲಸವನ್ನು ಸಮರ್ಥವಾಗಿ ಮಾಡಿದೆ.

**ಶಶಿಕಲಾ ವೀರಯ್ಯಸ್ವಾಮಿಯವರ 'ಬೆಲ್ಲ ಮತ್ತು ಕಲ್ಲು' ಕವಿತೆ**

ಪುರಾಣ ಮೌಲ್ಯದಲ್ಲಿ ಚಿತ್ರಿತಗೊಂಡ ಶ್ರೀ ರಾಮ ಮಾನವೀಯ ಮೌಲ್ಯಕ್ಕೆ ಒಳ ಪಟ್ಟಾಗ ಅವನ ಸ್ಥಾನ ಪುರುಷ ನೆಲೆಗಟ್ಟಿಲ್ಲೇ ಹೇಗೆ ಕಂಡು ಬರುತ್ತದೆ. ಎಂಬುದನ್ನು ವಿಡಂಬನಾತ್ಮಕವಾಗಿ ಚಿತ್ರಿಸಿದೆ,.

ಗರ್ಭಸ್ಥೆ ಮಂದಸ್ಮಿತೆ

ಜೀವನೋತ್ಸಾಹದಲ್ಲಿ ವಿಜೃಂಭಿಸುವ

ಸತಿ ಸೀತೆಯನ್ನು ಕಾಡು ಪಾಲಾಗಿಸಿ

ಕೈತೊಳೆದನೀ ಸೀತಾರಾಮ

ಮನುಷ್ಯನ ಸಹಜ ಸ್ವಭಾವದ ಕ್ರೂರತೆಯನ್ನು ಇಂದಿಗೂ ಬಿಟ್ಟು ಕೊಂಡಿಲ್ಲ ಅಹಲ್ಯೆಗೆ ಜೀವದಾನ ಮಾಡಿದ ಶ್ರೀರಾಮ ಮಾನವೀಯ ಮೌಲ್ಯದಿಂದ ಮೆರೆದರೆ ತನ್ನ ಪತಿ ಸೀತೆಯನ್ನು ಕಾಡಿಗಟ್ಟುವ ಮೂಲಕ ಪುರುಷ ಪ್ರಧಾನತೆಯ ಕ್ರೌರ್ಯದ ಪ್ರತಿರೂಪವಾಗಿದ್ದಾನೆ. ನಿಜ ಸತಿಗೆ ಕಲ್ಲಾಗುವ ಇವರು ಪರಸತಿಗೆ ಮಾತ್ರ ಬೆಲ್ಲವಾಗುತ್ತಾರೆ ಎಂಬ ಮಾತು ಪ್ರಸ್ತುತ ಪುರುಷ ವರ್ಗದ ಪ್ರತಿಬಿಂಬದಂತೆ ಕಂಡು ಬಂದಿವೆ.

**"ಭಾಮೆಯ ಭಾವನಾಗೀತೆ " ಕವಿತೆಯಲ್ಲಿ**

1 6,000 ಗೋಪಿಕಾ ಸ್ತ್ರೀಯರನ್ನು ಹೊಂದಿದ್ದ ಶ್ರೀ ಕೃಷ್ಣಾಭಾಮೆಯ ಅಳಲು ಯಾವ ರೀತಿಯದು ಎಂಬುದನ್ನು ತಿಳಿಯದೇ ಹೋಗುತ್ತಾನೆ ಎಂಬುದನ್ನು

ಬೇಕು ಬೇಕೆಂದಾಗೆಲ್ಲ ತೆಕ್ಕೆ ಗೊಬ್ಬಳು
ದಕ್ಕುತ್ತಿರುವಾಗ
ಪ್ರೀತಿಗಾಗಿ, ಹೌದು ಬರೀ ಪ್ರೀತಿಗಾಗೇ
ನೀನೆಂದೂ ವಿರಹ ದುರಿಯಲ್ಲಿ ಬೇಯಲಿಲ್ಲ
ಹುಯ್ಲಿಡುವ ಹಂಬಲದಿ ಕಾದಲೆಗೆ ಕಾಯಲಿಲ್ಲ.
ಇಂಥವನು ಪ್ರೇಮವೆಂದರೇನೆಂದು ಹೇಗೆ ಬಲ್ಲ?
ಬಲ್ಲಿದನಾಗಿದ್ದರೆ ನೀನು, ಹಾಗೆ
ನಾಥನಿದ್ದೂ ಅನಾಥೆಯಾಗುತ್ತಿರಲಿಲ್ಲ ನಾ ಹೀಗೆ

ಪುರಾಣ ಮೌಲ್ಯದ ಪಾತ್ರಗಳನ್ನು ಕೆದಕುತ್ತಾ ಅಂತರಂಗದ ಮತ್ತೊಂದು ಮಗ್ಗುಲನ್ನು ತಿಳಿಯ ಹೊರಡುವ ಕ್ರಿಯೆ ನಿರಂತರವಾಗಿ ಈ ಕವಿತೆಗಳಲ್ಲಿ ಮೂಡಿವೆ. ಕುತೂಹಲದೊಂದಿಗೆ ಈ ಕಾಲದವರ ಮಾನಸಿಕ ತಳಮಳವನ್ನು ಎಳೆ- ಎಳೆಯಾಗಿ ಚಿತ್ರಿಸಿವೆ. ನಮ್ಮ ಸಂಸ್ಕೃತಿ ಸಮಾಜಗಳು ಆರಾಧಿಸುವ ಪುರಾಣ ಪಾತ್ರಗಳನ್ನು ಅವರ ನಡವಳಿಕೆಗಳನ್ನು ಮರು ವಿಮರ್ಶೆಗೆ ಒಳ ಪಡಿಸುವ ಪ್ರಯತ್ನ ಗಮನಾರ್ಹ.

**ಒಂಟಿತನ :**

ಈ ಸಮಾಜದಲ್ಲಿ ವಿಶ್ವಾಸದ ಕೊರತೆ ಎಂಬುದು ಹೆಣ್ಣನ್ನು ಸದಾ ಕಾಡುವಂಥದ್ದು. ಸಾಮಾಜಿಕ ಕೌಟುಂಬಿಕ ನಿರ್ಬಂಧಗಳಿಂದಾಗಿ ಮೂಗುಬ್ಬಸಪಡುವ ಹೆಣ್ಣು ಕೊನೆಗೆ ಒಂಟಿತನವನ್ನೇ ತನ್ನ ಸಂಗಾತಿಯಾಗಿ ಬಯಸುತ್ತಾಳೆ. ಬಹುತೇಕ ಲೇಖಕಿಯರು ಕೊನೆಗೂ ತಮ್ಮ ಮನಸ್ಸಿನ ಭಾವನೆಗಳನ್ನು ಮುಕ್ತವಾಗಿ ಹಂಚಿಕೊಳ್ಳುವಂತಹ ವ್ಯಕ್ತಿ ಸಿಗದಿದ್ದಾಗ ತಮ್ಮ ಅಸಹಾಯಕತೆ ನೋವು , ದುಃಖಗಳನ್ನು ತಮ್ಮ ಕವಿತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಒಂಟಿತನದಲ್ಲಿ ಕನಸು ಕಲ್ಪನೆಗಳ ಮಹಾಪೂರವೇ ಹರಿದು ಬಂದಿದೆ.

ಸಂಧ್ಯಾರವರ ' ಒಂಟಿತನ' ಕವಿತೆಯಲ್ಲಿ
ನಡು ಹಾಯದಿರಲಿ
ಯಾವ ಬೆಳಕು
ಕತ್ತಲೆಯೊಳಗೆ ರೂಪ ಬಣ್ಣಗಳಂತೆ
ಕರಗಲಿ
ನನ್ನ ರೋದನಗಳು
ಒಂಟಿತನದಲ್ಲಿ

ಕೆಲವೊಂದು ಸಾರಿ ಎಲ್ಲರಿಂದ ದೂರಾಗಿ ಒಂಟಿಯಾಗಿರಬೇಕೆಂಬ ಮನಸ್ಸು ಎಲ್ಲರಿಗೂ ಇರುತ್ತದೆ. ತನ್ನ ನೋವು ನಲಿವುಗಳು, ಹತಾಶೆಗಳಿಂದ ದೂರ ಸರಿದು ಕತ್ತಲೆಯ ರಾತ್ರಿಯಲ್ಲಿ ಹೊಸದೊಂದು ಪ್ರಪಂಚ

ಕಂಡು ಕೊಳ್ಳುವ ರೀತಿ ಇದೆಯಲ್ಲ ಅದು ಎಲ್ಲದರಿಂದ ಮುಕ್ತತೆಯ ಭಾವವನ್ನು ಅರಸುತ್ತದೆ.

ತಂಪೆರೆಯುವ ತಾರೆಗಳು , ನಿಸರ್ಗ, ಹಕ್ಕಿಗಳ ನಾದ ಇಂಚರದ ಧ್ವನಿಯಿದ್ದರೂ ಎಲ್ಲರಿಂದ ದೂರ ಸರಿದು ಕತ್ತಲೆಯ ಪ್ರಪಂಚದಲ್ಲಿ ಒಂಟಿಯಾಗಿ ರೋದಿಸುವ ಕ್ರಿಯೆ ಮನಸ್ಸಿಗೆ ನೆಮ್ಮದಿ ತರುವಂತದ್ದು.

ಸವಿತಾ ನಾಗಭೂಣಷಣರವರ "ಕಾಡಿನಲ್ಲಿ" ಕವಿತೆ

ಇಲ್ಲಿ ಬಯಸಿದಂತೆ ಬದುಕಬಹುದು
ಇಚ್ಛೆಯಂತೆ ಸಾಯಬಹುದು.
ಸುತ್ತಲೂ ಮರಗಳು
ಮರದೊಳಗೆ ಕಿಕ್ಕೆಂದು
ಪರಿಮಳಿಸಿವೆ ಹೂವುಗಳು
ಅಲ್ಲ..... ಎಲ್ಲಾದರೂ
ಕಾಡು ಸುತ್ತಿ ಮರಳುವುದುಂಟೆ!
ಈಗ ಇಲ್ಲಿ ಬಯಸಿದಂತೆ ಸಾಯಬಹುದು.
ಇಚ್ಛೆಯಂತೆ ಬದುಕಬಹುದು.

ಕಾಡಿನ ವಿಸ್ತಾರ ಒಂಟಿತನದ ಅಗಾಧತೆಯೊಂದಿಗೆ ಸಮೀಕರಣಗೊಂಡಿದೆ. ಒಂಟಿತನದ ನೀರವತೆ ಕಾಡಿನ ಹಸಿರಿನ ಸಮೃದ್ಧತೆಯೊಂದಿಗೆ ಬೆಸೆದುಕೊಂಡಾಗ ತನ್ನಿಚ್ಛೆಯಂತೆ ಸಾವು ಮತ್ತು ಬದುಕು ಎರಡೂ ಸಮೀಕರಣಗೊಳ್ಳುತ್ತವೆ.

ಶಶಿಕಲಾ ರವರ 'ನಾನು ರಾತ್ರಿಗಳನ್ನು ಮಾತ್ರ ಪ್ರೀತಿಸುತ್ತೇನೆ' ಕವಿತೆ

ಹಗಲು ಕಾಡುವ ಹಲವು ಹಲವಂಡಗಳಲ್ಲಿ
ಮೊಗದ ಕೆಳಗಿನ ಹೆಗಲು ಸವೆಯುವಲ್ಲಿ
ನಾ ಮರೆತ ಸಾವು ರಾತ್ರಿಯಲ್ಲಿ ಸದ್ದಿಲ್ಲದೆ
ಬಂದು ಬಾಗಿಲು ಬಡಿಯುತ್ತದೆ
ತಟ್ಟನೆ ಮುನಿದ ಇನಿಯನ್ನೊಲಿಸಲು ಅಪ್ಪಿಕೊಳ್ಳುತ್ತೇನೆ.
ನಿದ್ದೆಯ ಮಗುವನ್ನು ಬಿಸಿ ಮೊಲೆಯನುಣಿಸುತ್ತೇನೆ
ಈ ಉತ್ಕಟ ಪ್ರೀತಿಯ ಪರಮಾವಧಿಯಲ್ಲೇ
ನನಗೆ ಸಾವು ಸಹಜವಾಗುವುದರಿಂದ
ಅದನ್ನು ಹಾರ್ದಿಕವಾಗಿ ಸ್ವಾಗತಿಸುತ್ತೇನೆ.
ಅದಕ್ಕೆಂದೇ ನಾನು ರಾತ್ರಿಗಳನ್ನು ಮಾತ್ರಪ್ರೀತಿಸುತ್ತೇನೆ.

ನೀರವ ರಾತ್ರಿಯಲ್ಲಿ ಹೊಸದೊಂದು ಲೋಕದ ಸೃಷ್ಟಿಯ ಬಗೆ ಇಲ್ಲಿದೆ. ಏಕಾಂಗಿತನಕ್ಕೆ ಸ್ಫೂರ್ತಿ ತಾನು ಕಟ್ಟಿಕೊಂಡ ಕನಸುಗಳು ಸಾಕ್ಷಿಯಾಗಿ ಕಂಡು ಬಂದಿದೆ. ತಾಯ್ತನವನುನ ಹಂಬಲಿಸುವ ಹೆಣ್ಣು ಮಗುವಾಗಿ ರಾತ್ರಿಯ ನಕ್ಷತ್ರಗಳ ಸಾಲಿನಲ್ಲಿ ಮುಳುಗುತ್ತಾಳೆ. ಇನಿಯನ ಬಯಸುವಿಕೆ , ರಾತ್ರಿಯ ಜೀವನ, ಮಕ್ಕಳ ಮುದ್ದಿಸುವಿಕೆ, ದಾಂಪತ್ಯ ಮತ್ತು ತಾಯ್ತನದ ಸಂತೃಪ್ತಿಯಂದ ಹೆಣ್ಣಿನ ಪರಿಪೂರ್ಣತೆ ಇಲ್ಲಿಮುಖ್ಯವಾಗಿ ಕಂಡು ಬಂದಿದೆ.

ಹೆಣ್ಣು ಬಯಸುವ ಸಹಜ ಜೀವನ ಇಲ್ಲಿ ವ್ಯಕ್ತವಾಗಿದೆ. ಹಗಲು ಮತ್ತು ರಾತ್ರಿಗಳು ಹೊಸದೊಂದು ಲೋಕವನ್ನು ಹೆಣೆದುಕೊಳ್ಳುವಲ್ಲಿ ಸಹಕರಿಸುತ್ತವೆ. ರಾತ್ರಿಯ ನೀರವತೆ ಮತ್ತು ಪ್ರಶಾಂತತೆ ಕಲ್ಪನೆಗೆ ಹೆಚ್ಚು ಸಹಕರಿಸುತ್ತವೆ.

ಒಂಟಿತನದಲ್ಲಿ ಕನಸು ಕಲ್ಪನೆ ಮುಂತಾದವುಗಳು ತನ್ನದೇ ಆದ ಕಲ್ಪನಾ ವಿಲಾಸದಲ್ಲಿ ವಿಹರಿಸುತ್ತವೆ. ಸದಾ ಎಚ್ಚರದ ಪ್ರಜ್ಞೆಯೊಂದಿಗೆ ಬದುಕಿನ ಒಳಾರ್ಥಗಳ ಸೂಕ್ಷ್ಮತೆಗಳು ಸಿಲುಕಿದಾಗ ಒಂಟಿತನವೇ ಪ್ರಿಯವಾಗುತ್ತದೆ.ಒಂಟಿತನಗಳ ಕಲ್ಪನೆಯ ಕಟ್ಟುವಿಕೆ ಹೆಚ್ಚಾಗಿ ರಾತ್ರಿಯ ಕತ್ತಲೆಯನ್ನು ಬಯಸುತ್ತದೆ. ತಿಳಿಯದ ಲೋಕಕ್ಕೆ ಪ್ರವೇಶಿಸಿದಾಗ ಮೂಡುವ ಆಲೋಚನೆಗಳ ಪ್ರತೀಕ ಒಂಟಿತನದಲ್ಲಿ ಹುಟ್ಟುವ ಭಾವನೆಗಳು ಎನ್ನಬಹುದು.

**ಅಸಹಾಯಕತೆ ಮತ್ತು ಅಸ್ತಿತ್ವ**

ಮಹಿಳೆ ತನ್ನ ಆಲೋಚನೆಗಳನ್ನು ಎಷ್ಟೇ ಬೆಳೆಸಿದರೂ ಸಹ ಕೆಲವೊಂದು ಪರಿಸ್ಥಿತಿಗಳಲ್ಲಿ ಅವಳ ಅಸಹಾಯಕತೆಯೇ ಸ್ಪಷ್ಟವಾಗಿ ಕಂಡು ಬಿಡುತ್ತದೆ. ಅದು ಸಂಸಾರದಲ್ಲಾದರೂ ಸರಿ, ಉದ್ಯೋಗದಲ್ಲಾದರೂ ಸರಿ ಅಥವ ಈ ಸಮೂಹದೊಂದಿಗೆ ಅವಳು ಬದುಕು ನಡೆಸುವ ಕ್ರಮದಲ್ಲಿದ್ದರೂ ಈ ಅಸಹಾಯಕತೆಯ ಚಿತ್ರಣ ಕಂಡು ಬರುತ್ತದೆ.

ಮಾಲತಿಯವರ 'ಮನೆ' ಕವಿತೆಯಲ್ಲಿ

ಸುತ್ತಿಕೊಂಡಿದ್ದೇವೆ ಒಂದು ಮನೆ
ನಮ್ಮನಿಲ್ಲಿ ಹೊತ್ತು ನಡೆದಿದ್ದೇವೆ
ಓ ಯಾರಿಲ್ಲಿ
ನನ್ನವರೇ ಓ ಎಲ್ಲಿ !
ಕರೆದು ತಂದವರೆ ಈಗ ನೀವೆಲ್ಲಿ?

ಎಷ್ಟುಕೂಗಿದರೂ ಧ್ವನಿ ಮುಟ್ಟುವುದಿಲ್ಲ

ಮಾರ್ದನಿ ಹುಟ್ಟುವುದಿಲ್ಲ

ದೃಷ್ಟಿ ಬೆಸೆಯುವುದಿಲ್ಲ! ಹೃದಯ ಹೊಸೆಯುವುದಿಲ್ಲ!

ಎಂಥ ಗೋಡೆಗಳಿವು ಸ್ಪಂದಿಸುವುದಿಲ್ಲ

ಎಂಥ ಬೆಳಕಿದು ಬಂಧಿಸುವುದಿಲ್ಲ!

ಇರುವೆವೋ ಸತ್ತಿರುವೆವೋ?

ಯಾರು ಸತ್ತವರಿಲ್ಲಿ ?

ನಾವೋ

ನಮ್ಮ ಮನೆಯೋ?

ಸಂಸಾರ ಬಂಧನದಲ್ಲಿ ಬಂಧಿಯಾದ ಹೆಣ್ಣು ಮನೆಯನ್ನು ಕಂಡು ಕೊಳ್ಳುವ ರೀತಿ ಬಂಧನದ ಗೋಡೆಯಂತೆ ಅರಣ್ಯರೋದನದಂತೆ, ಮನೆಗೆ ಗೋಡೆ ಇದ್ದರೂ ಸಹ ಪ್ರತಿಸ್ಪಂದಿಸುವವರ ಮನದಿಂದ ದೂರ ಸಂದಿದೆ. ಇದ್ದು ಸತ್ತಂತ ಬದುಕನ್ನು ನಡೆಸುತ್ತಿದ್ದೇವೆಯಲ್ಲ ಅದು ನಾವೋ, ನಮ್ಮಗೋಡೆಗಳಿರುವ ಮನೆಯೇ? ಎಂದು ತನ್ನೊಂದಿಗೆ ಎಲ್ಲರಲ್ಲೂ ಪ್ರಶ್ನೆ - ಮೂಡುತ್ತಿವೆ.

ಪ್ರತಿಭಾರವರ ಕವನ ಕವಿತೆಯಲ್ಲಿ

ಭಾವಗಳು ಒಳಗೊಳಗೆ ಹುದುಗಿ

ಮೇಲಕ್ಕೆಳೆದರೆ ಹಿಂದೆ ಸರಿದು

ಬರೆಯಬೇಕೆ ನಾನು ಇದನ್ನೆಲ್ಲ,

ಚಿಂತೆ ಚಿತೆ ಹೊತ್ತಿ ಸಿದ ಜಿಂಕೆ ಧಗ ಧಗನೆ

ಹೇಳಬೇಕೆ ಈ ಅಗ್ನಿ ಕಾಂಡದ ಕಥೆಯೇ?

ಇನ್ನೂ ಬಿಡಿಸಿದರೆ ಎಲ್ಲಾ ವಾಚ್ಯ

ಎನ್ನುತ್ತೆ ಅವಾಚ್ಯಗೊಳಿಸಿ ಮಾತು

ಹೆಚ್ಚಾಯ್ತೆಂದು ಎಲ್ಲ ಕತ್ತರಿಸಿ

ತುಂಡು ಲಂಗದ ಹುಡುಗಿಯ ತೊಡೆ

ಸವರಿ ಆಹಾ ಏನು ನುಣುಪು ಎಂದು

ಬಾಯಿ ಚಪ್ಪರಿಸಿ ಕಾವ್ಯವೆಂದರೆ ಇದೇ

ಎನ್ನುವ ಮಾತು ಕೇಳುತ್ತಾ

ನೇವರಿಸಿಕೊಂಡೆ.

ಭಾವನೆಗಳೆಲ್ಲ ಕಾವ್ಯವಾಗಿಸ ಹೊರಟಾಗ ಬರವಣಿಗೆಯಲ್ಲಾಗುವ ತೊಡಕು ಏನೆಂಬುದು ಇಲ್ಲಿ ವ್ಯಕ್ತವಾಗುತ್ತಿದೆ. ಹೆಣ್ಣನ್ನು ಶೃಂಗಾರ ಮಾಧ್ಯಮವಾಗಿ ನೋಡುವ ಪುರುಷ ಸಮಾಜ ಕಾವ್ಯದಲ್ಲೂ ಕಾಮುಕತೆಯನ್ನು ವೈಭವೀಕರಿಸುವ ಬಗೆಯನ್ನು ಲೇಖಕಿ ವಿಡಂಬಿಸಿದ್ದಾರೆ. ಹೆಣ್ಣಿನ ಅಂತರಂಗದ ಎಲ್ಲಾ ಮೀಟುವಿಕೆಯ ಭಾವನೆಗಳೂ ಕಾವ್ಯ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಮಾಲತಿಯವರ 'ನಮ್ಮ ಹಾಡು' ಕವಿತೆಯಲ್ಲಿ

ಇರಬೇಕು ನಾನೀಗ
ನನ್ನ ಕನಸು ಕಲ್ಪನೆಗಾಗಿ
ಬುದ್ಧಿ ಭಾವನೆಗಾಗಿ
ಆತ್ಮಗೌರವಕ್ಕಾಗಿ
ನನಗಾಗಿ ನಾನಾಗಿ ಇರಲೇಬೇಕು!
ದೋಚಿಕೊಂಡೆದ್ದವರನ್ನು
ಪಕ್ಕಕ್ಕೆ ಸರಿಸಿ
ನನ್ನ ದಾರಿಯ
ನಾ ಕಂಡು ಕೊಳ್ಳಬೇಕು.
ನನ್ನ ದಾರಿಯನಾ
ಕಂಡುಕೊಳ್ಳಬೇಕು.

ಹೆಣ್ಣಿನ ಅಸ್ಥಿತ್ವದ ಹುಡುಕಾಟ ಈ ರೀತಿಯದು ಇದುವರೆಗೆ ಮೌನವಾಗಿ ಸಹಿಸಿಕೊಂಡು ಬಂದ ದೌರ್ಜನ್ಯ ದಬ್ಬಾಳಿಕೆ, ದ್ವಂದ್ವ ನೀತಿಗಳನ್ನು ಮೆಟ್ಟಿ ನಿಲ್ಲಬೇಕೆಂಬ ಹಂಬಲ ಇಲ್ಲಿದೆ ರಾತ್ರಿಗಳು ಕನಸುಗಳನ್ನು ಕೊಟ್ಟು ನಿತ್ಯ ಸುಡುತ್ತಾ ಸತಿ ಸಾವಿತ್ರಿ ಸೀತೆಯ ಪಟ್ಟದಿಂದ ದೂರ ಉಳಿದ ಹೆಣ್ಣು ತನ್ನ ಆತ್ಮ ಗೌರವಕ್ಕಾಗಿ ಮತ್ತು ಎಲ್ಲಾತಲೆಮಾರಿನ ಹೆಣ್ಣುಗಳಿಗೂ ಭವಿಷ್ಯ ಪ್ರತಿಜ್ಞೆಯ ವಾಕ್ಯದಂತೆ ಕಂಡು ಬಂದಿದೆ. ಈ ಎಲ್ಲಾ ಪಾರಂಪರಿಕ ಮೌಲ್ಯಗಳ ಹೇರಿಕೆಯಿಂದ ಸಿಡಿದೇಳುವ ಒಂದು ಮಾರ್ಗ ಕವಿತೆಯ ಮೂಲಕ ವ್ಯಕ್ತವಾಗಿದೆ. ಇಲ್ಲಿ ಬದುಕಿನ ನಿಜವಾದ ಅರ್ಥ ಕಂಡು ಬಂದಿದೆ. ಈ ಕವಿತೆ ಮುಖ್ಯವಾಗಿ ತನ್ನ ಅಸ್ತಿತ್ವಕ್ಕಾಗಿ ನಡೆಸುವ ಹೋರಾಟವನ್ನು ತಿಳಿಸುತ್ತದೆ. ಬದುಕಿಗಾಗಿ ನಡೆಯುವ ಹೋರಾಟ ಇಲ್ಲಿ ಮುಖ್ಯವಾಗಿ ಕಂಡು ಬಂದಿದೆ. ಪ್ರಸ್ತುತ ಸರ್ಕಾರದ ಒಳ ರಾಜಕೀಯವನ್ನು ವಿಡಂಬಿಸುತ್ತಾ ತರಾಟೆಗೆ ತೆಗೆದುಕೊಳ್ಳುವ ಮಾದರಿ ಈ ಕವಿತೆಯಲ್ಲಿ ಮೂಡಿದೆ.

ಕಟ ಕಟೆಯಲ್ಲಿ ನಿಲ್ಲಬೇಕಿದೆ ನಾನು

ತತ್ತರಿಸುವ ಜನ ಜಂಗುಳಿ ನಡುವೆ

ಸುಯ್ಯನೆ ನಿಟ್ಟುರಿಸು

ತಬ್ಬಲಿ ಭಾವ ಹರಕೆಯ ಕುರಿ

ತಾರಾಮಾರ ತಳ್ಳಿ, ತಳ್ಳಿ

ಗೊಂದಲಗೊಂಡು ಬಲಿ ಪೀಠದಲ್ಲಿ

ಉದ್ಯೋಗದ ನೆವದಲ್ಲಿ ವಯಕ್ತಿಕವಾಗಿ ಅನುಭವಿಸಿದ ನೋವು- ಯಾತನೆಗಳು ಈ ಕವಿತೆಯಲ್ಲಿ ಮೂಡಿವೆ. ಭ್ರಷ್ಟ ರಾಜಕಾರಣದಲ್ಲಿ ಹೋರಾಟಕ್ಕೆ ನಿಂತವರು ಬಲಿ ಪೀಠದಲ್ಲಿ ಹರಕೆಯ ಕುರಿಗಳಾಗುತ್ತಾರೆ ಎಂಬುದನ್ನು ಸ್ವತಃ ನೋವುಂಡು ಈ ಕವಿತೆ ಚಿತ್ರಿತಗೊಂಡಿದೆ.

ಕುರಿ ಕೋಟಿನ ಜೇಬಿನಲ್ಲಿ ನ್ಯಾಯವನು ಹಿಡಿದಿಟ್ಟವ

ದಲ್ಲುಳಿಯಾಗುತ್ತಾನೆ ಈ ವ್ಯವಸ್ಥೆಯಲ್ಲಿ

ಆಲದ ಮರದ ಕೆಳಗೆ ಕಾಗೆ ಗುಬ್ಬಚ್ಚಿ

ಹೇತ ಹೇಲಲ್ಲಿ ಗಿಳಿ ಜೋಯಿಸನ ಶಾಸ್ತ್ರ

ಕರಿ ಕೋಟಿನ ಜೇಬಲ್ಲಿ ಬರಿ ತೂತುಗಳು

ಜಾರುವ ಬರಿ ಭರವಸೆಯ ಮಾತುಗಳು

ಬದುಕಿಸಲು ಇವೆ ಸಾಕಷ್ಟು ಸಂಜೀವಿನಿ ಮಾತ್ರೆಗಳು

ಹಾಗೆ ಭದ್ರವಿದೆ ನಮ್ಮ ಗುಂಡಿಗೆ ಹಾಗೂ ಜೇಬು .

ಸತ್ಯವನ್ನು ನಿರ್ಧರಿಸುವ ನ್ಯಾಯಾಲಯದಲ್ಲಿ ನ್ಯಾಯಾಲಯಕ್ಕಾ ಅಲೆಯುವ ಪರಿಸ್ಥಿತಿ ಇಲ್ಲಿ ವಾಸ್ತವ ಚಿತ್ರಣದೊಂದಿಗೆ ಮೂಡಿದೆ.

ಕರಿ ಕೋಟಿನವರ ಭರವಸೆಯ ಮಾತುಗಳಿಂದ ವಂಚಿತರಾದ ಜನತೆ, ಅವನು 'ಸುಲಿಗೆ ಮಾಡುವ ಕ್ರಮ' ತೂತು ಜೋಬಿಗೆ ತುಂಬದ ಹೊಟ್ಟೆ' ಎಂಬ ಮಾತನ್ನು ನೆನಪಿಗೆ ತರುತ್ತಿದೆ. ಸತ್ತು ಬದುಕುವ ಭರವಸೆಯ ಮಾತುಗಳು ಎಲ್ಲರಿಂದ ಮುಕ್ತವಾಗಿ ಯಾವುದಕ್ಕೂ ಬಗ್ಗದೆ ತಮ್ಮ ಕೆಲಸ ಸಾಧಿಸುವ ಛಲ ಇಲ್ಲಿ ವ್ಯಕ್ತವಾಗಿದೆ.

ನೆರಳಾಗಿ ತೂಗು ಮೈಮೇಲೆ ಕವಿತೆಯಲ್ಲಿ

ಜಾರಿ ಹೋಗಬೇಕು ಪ್ರಿಯೆ

ನನ್ನಲ್ಲಿನ ನಿನ್ನತನ,ನಿನ್ನಲ್ಲಿನ ನನ್ನತನ

ಸುಳಿವೇ ಇಲ್ಲದೆ ಮಂಗ ಮಾಯವಾಗಿ

ಮಟ ಮಟ ಮಧ್ಯಾಹ್ನ

ರಸ್ತೆಯಲ್ಲಿನ ಅಕುಡೊಂಕು ಗೊಡ್ಡು ಮರದ ಹಾಗೆ

ಬೆತ್ತಲಾಗಬೇಕು

ಎಲ್ಲವನ್ನು ಕಳಚಿ ಒಗೆಯಬೇಕು

ಎಲ್ಲವನ್ನು ಬಹುಶಃ ಎಲ್ಲವನ್ನೂ.....

ಶಬ್ದಾಡಂಬರಗಳಲ್ಲಿ ಮುಳುಗಿ

ಕತ್ತು ಹಿಡಿಯುವ ಮುನ್ನವೇ

ಒಣ ಮಾತುಗಳ ಬಣ್ಣ ಬಣ್ಣತೆಯಲ್ಲಿ

ಮೈಯುಬ್ಬುವ ಮುನ್ನ

ಮೌನದಲ್ಲಿ ಅಡಗಿ

ಮಾತೇ ಜ್ಯೋತಿರ್ಲಿಂಗವಾಗಿ

ಹಬ್ಬಿಬಿಡಬೇಕು ಇಷ್ಟಿಷ್ಟೇ

ಇಷ್ಟಿಷ್ಟೇ ... ಆಕಾಶದೆತ್ತರಕ್ಕೆ

ಪ್ರೀತಿಯಲ್ಲಿನ ಆತ್ಮ ನಿವೇದನೆ ಒಂದು ಕಡೆಯದಾದರೆ , ಸಾಮೂಹಿಕವಾಗಿ ನಾವು ಕಂಡ ನೋವುಗಳು ಕೆಲವೊಮ್ಮೆಮ ಪ್ರತಿಭಟನೆಯ ಸ್ವರೂಪ ಪಡೆಯದೆಮೌನದೊಂದಿಗೆ ಬೆರತು ಹೋಗುತ್ತದೆ. ಇಹ ಮತ್ತು ಪರಗಳು ಪ್ರೀತಿಯೊಂದಿಗೆ ಜಿಗಿಯುವುದನ್ನು ನೋಡಬಹುದು. ಮಾತೇ ಜ್ಯೋತಿರ್ಲಿಂಗ ವಚನ ಸಾಹಿತ್ಯದ ಮಾಯ ಪ್ರೀತಿಯೊಂದಿಗಿನ ಮೌನವನ್ನು ಧ್ವನಿಸುವಂತೆ ಚಿತ್ರಿತಗೊಂಡಿದೆ.

ಪ್ರೇಮವೆಂದರೆ ಹೀಗೆ ಕವಿತೆಯಲ್ಲಿ

ವಸಂತದ ಉರುಳಲ್ಲಿ

ಎಷ್ಟೊಂದು ಚಿಲಿಪಿಲಿ ನಾದ

ಎಲೆ ಎಲೆಗಳು ಬಡಿದು

ಮೊಗ್ಗು ನಿಗುರಿ, ಒಗರು ಕಾಯಿ ಹುಳಿಯಾಗಿ

ಬೆರಳ ತುದಿ ಚುಕ್ಕಿಯಲ್ಲಿ

ಮುಳ್ಳು ಚುಚ್ಚಿದ ದಾರವಾಹಿ ಮಾಯದ ನೋವು

ಹಾಡುಗನೆದೆಯಲ್ಲಿ

ಉಸಿರಿದ ಉಸಿರಲ್ಲಿ ಮೊದ ಮೊದಲು

ಕೆಂಡ ಸಂಪಿಗೆಯ ಸುಡುವ ಕಂಪು ಆಗ

ಬಣ್ಣ ಕಳೆದ ಪಕಳೆಗಳ

ನಿರ್ಗಂದ ತಣ್ಣನೆ ಉಸಿರು ಈಗ

ಪ್ರೀತಿ ಯೆಂದರೆ ಇಷ್ಟೇ

ಸುಮ್ಮನೆ ನಿರೀಕ್ಷೆ, ತಲ್ಲಣಗಳಲ್ಲಿ ಮುಳುಗಿ

ಹುಡುಕಾಟ , ಅನುಭವಗಳಲ್ಲಿ ಮಗ್ನವಾಗುವುದು

ಸಿಕ್ಕರೆ ತಲೆಎತ್ತಿ ಹೂ ನಗುವುದು

ಸಿಗದಿದ್ದರೆ ಬಾಗಿ ವಿಷಣ್ಣವಾಗುವುದು

ಪ್ರೀತಿಯಲ್ಲಿ ಸಿಲುಕಿ ಅದು ಉರುಳಾಗಿ ಕಂಡರೂ ವಸಂತದಲ್ಲಿನ ಚಿಗುರಿನಂತೆ ಕಂಡು ಬರುತ್ತದೆ. ಸುಗಂದ ಸೂಸುವ ಹೂಗಳು ಪ್ರೀತಿಯ ದನಿ ಕಳೆದುಕೊಂಡಾಗ ನಿರ್ಜೀವಾದಂತೆ ಕಂಡು ಬಂದರೂ , ನಿರೀಕ್ಷೆಗೆ ನೀರೆರೆಯುವವರು ಸಿಕ್ಕಾಗಿ ಹೂತಲೆ ಎತ್ತಿ ನಿಲ್ಲುತ್ತದೆ. ಎಂಬ ಮಾತುಗಳಲ್ಲಿ ಸಹಜ ಪ್ರೀತಿ ಕಂಡು ಬರುತ್ತದೆ. ಪ್ರಮುಖವಾಗಿ ಈ ಕವಿತೆಯಲ್ಲಿನೈಜತೆಯ ಬದುಕಿನ ಬಿಂಬವನ್ನು ಕಾಣಬಹುದು.

## ಪುರುಷರ ದೃಷ್ಠಿ ಕೋನದಲ್ಲಿ ಹೆಣ್ಣು

ಮಾತೃ ಸ್ವರೂಪಿ, ಕರುಣಾಮಯಿ, ತ್ಯಾಗಮಯಿ ಎಂದೆಲ್ಲಾ ಕರೆಸಿಕೊಳ್ಳುವ ಹೆಣ್ಣು , ಅದೇ ಪುರುಷನ ದೃಷ್ಟಿಕೋನದಲ್ಲಿ ಲೈಂಗಿಕತೆಯ ಕೇಂದ್ರ ಬಿಂದುವಾಗುತ್ತಾಳೆ. ಪುರುಷ ಕಂಡು ಕೊಳ್ಳುವ ನೆಲೆಗಟ್ಟು ಆಕ್ರಮಣಕಾರಿಯದಾದರೆ ಹೆಣ್ಣು ಅದನ್ನು ಹೇಳುವ ರೀತಿ ಬೇರೆ ಬಗೆಯದು.

ಮಮತಾರವರ

ನಾನು

ಅಂದರೆ

ಒಂದು ಜೊತೆ

ಮೆತ್ತಗಿನ ಮೊಲೆ

ತೊಡೆ ಸಂದಲ್ಲಿ ಅಡಗಿದ

ಕತ್ತಲ ಕೋಶ

ಎಂಬ ಮಾತು ಹೆಣ್ಣು ತನ್ನ ಅಸ್ತಿತ್ವದ ಮಾದರಿಯನ್ನು ಇದ್ದಂತೆ ವ್ಯಕ್ತ ಪಡಿಸುವ ಮತ್ತು ಆಲೋಚನೆಯ ಕಲ್ಪನಾ ಮಾದರಿಗೆ ಅಳವಡಿಸುವ ಕ್ರಮ ಇಲ್ಲಿದೆ

ಸಂಧ್ಯಾರವರ 'ಗಂಡ - ಪ್ರಿಯತಮನಲ್ಲ' ಕವಿತೆ

ಹೆಣ್ಣು ಸಹಜವಾಗಿ ಹಾಸ್ಯ ಪ್ರಜ್ಞೆ ಹೊಂದಿರುತ್ತಾಳೆ. ಈ ಪ್ರಜ್ಞೆಯನ್ನು ಕವಿಯತ್ರಿಯರಲ್ಲಿಯೂ ಗುರ್ತಿಸಬಹುದು. ಬದುಕಿನ ಸೂಕ್ಷ್ಮ ಸಮಸ್ಯೆಗಳಿಗೆ ಹಾಸ್ಯದ ಲೇಪ ಕೊಟ್ಟು ಬದುಕನ್ನು ಸಹ್ಯವಾಗಿಸಿಕೊಳ್ಳುವ ರೀತಿ ಇಲ್ಲಿದೆ.

ಯಾವ ಸೀರೆ ಉಡಲಿ

ತಲೆ ತಿನ್ನಬೇಡ

ಏನಡಿಗೆ ಮಾಡಲಿ

ಏನಾದರೊಂದು

ಲಾಲ್ ಬಾಗ್ಗೆ ಹೋಗೋಣ

ಅ ಸಂತೆಗಾ

ಬೇಲ್ ಪೂರಿ ತಿನ್ನೋಣ

ಆ ಕಸವನ್ನೇ

ವಾಕಿಂಗ್ ಹೋಗೋಣ

ಈ ಚಳಿಯಲ್ಲೇ

ಶಾಪಿಂಗ್ ಹೋಗೋಣ

ಬೇರೆ ಕೆಲಸವಿಲ್ಲವೆ

ಲೇಟ್ ನೈಟ್ ಫಿಲಂ ನೋಡೋಣ

ನಿದ್ದೆಗೆಡಬೇಕೆ

ನಾ ಹೇಗೆ ಕಾಣುವೆ

ಎರಡು ಮಕ್ಕಳಾದವು

ಹೇಗಿದ್ದರೇನು

ಅಮಿತಾಭೆಯರು ಹೇಳುತ್ತಾರೆ

ಗಂಡ ....... ಪ್ರಿಯತಮನಲ್ಲ

ದಾಂಪತ್ಯದ ಅಥವಾ ಗಂಡಿನ ಅರಸಿಕತೆಯನ್ನು ನವಿರಾಗಿ ವ್ಯಂಗ್ಯ ಮಾಡುವ ಕವಿತೆ ಇದಾಗಿದೆ. ಹಾಸ್ಯದೊಂದಿಗೆ ಬದುಕಿನ ಸೂಕ್ಷ್ಮತೆಯನ್ನು ಕಟ್ಟಿಕೊಂಡುವುದು ಹೆಣ್ಣಿನ ಜಾಣ್ಮೆಯೂ ಹೌದು. ಹಾಗೂ ಅನಿವಾರ್ಯದೊಂದಿಗೆ ಅಸಹಾಯಕತೆಯೂ ಹೌದು. ಬದುಕಿನ ಎಲ್ಲದರಲ್ಲಿಯೂ ಈ ಗುಣಗಳು ಅಗತ್ಯ ಎಂಬುದು ಈ ಕವಿತೆಗಳು ಬಿಂಬಿಸುತ್ತವೆ.

ಗಂಡು ಹೆಣ್ಣಿನ ಮಾತುಕತೆ

ಮಾಲತಿಯವರ ಸಂವಾದಕವಿತೆಯಲ್ಲಿ

ನೀನಿಲ್ಲದಿದ್ದರೆ ನಾ ಬದುಕುವುದಿಲ್ಲ

ನಾವು ಭೇಟಿಯಾಗದೆ ಇದ್ದರೆ

ಜೀವಕೊಂಡು ಅರ್ಥ ಬರುತ್ತಿರಲಿಲ್ಲ

ಅರ್ಥ ಒಳಗಿನ ಬೆಳಕು ನನ್ನದೇನು ಚಳಕ?

ಏಕೆ ನಿನ್ನೆ ನಲಿವು ಗೆಲುವು?

ನಿನ್ನ ಎಂಥ ಸಾಧೆಗೂ ಅಲ್ಪವೇ ಅದು ಪ್ರತಿಫಲವು?

ಇಲ್ಲಿ ಇಲ್ಲಿ ನಿನ್ನಿಂದಲೇ ನಾ ಪರಿಪೂರ್ಣ

ಜೀವನೇವೇ ಅಪರಿಪೂರ್ಣ ವಿದ್ದಾಗ ಇಂಥ ಮಾತೇಕೆ?

ನನ್ನ ಧೇಯತೆ ನೀ ಚೈತನ್ಯ ಚಿಲುಮೆ?

ಇಂಥ ಅವಲಂಬಿನದ ಎಂಥ ಸಾಧಕ ನೀನು?

ಪರೀಕ್ಷಿಸುವೇಕೆ ಬಿಡು ನೀ ನನಗೆ ಬೇಕು ಅಷ್ಟೆ:

ಸರಿ ಬೇಕಾದ್ದು ಸಿಕ್ಕುವುದಿಲ್ಲ , ಸಿಕ್ಕಿದ್ದು ದಕ್ಕುವುದಿಲ್ಲ

ಓ ಪ್ರಿಯೆ ಏಕೆ ಇರಿಯುತ್ತೀ ಇಂಥ ಕ್ರೂರ ಪ್ರಶ್ನೆಗಳಿಂದ ಕ್ರೂರ ಪ್ರಶ್ನೆಗಳೇ ? ಪ್ರಿಯಾ ಗಂಭೀರ ಉತ್ತರಗಳಿವು, ಹೆಣ್ಣು ಮತ್ತು ಗಂಡಿನ ಮಾತುಕತೆ ಸಂವಾದ ರೂಪದಲ್ಲಿದ್ದರೂ ಬದುಕಿನ ಸೂಕ್ಷ್ಮತೆಗಲು ಪಡೆಯುವಿಕೆಯ ಹಂಬಲ ಹೆಚ್ಚಿದ್ದಾಗೂ ದಕ್ಕಲಾರದ ಸೂಕ್ಷತೆಗಳು ಕವಿತೆಯ ಸಾಲುಗಳೇ ಧ್ವನಿಸುತ್ತವೆ. ಅವಲಂಬನೆ ಎಂಬುದು ಜೀವನದಲ್ಲಿ ಪರಿಪೂರ್ಣತೆನಯನ್ನು ಗಂಡು ಹೆಣ್ಣಿನಿಂದ ಪಡೆಯುವ ಹಂಬಲ

ತೀವ್ರವಾಗಿ ಕಂಡು ಬರುತ್ತದೆ. ಸಾಧನೆಗೆ ಪ್ರೀತಿಯು ಪ್ರೇರಕವಾದ ಬಗೆ ಮಾತಿನ ಮೂಲಕ ಹೊರ ಹೊಮ್ಮುತ್ತಿದ್ದರೂ, ಮಾತಿನ ನಡುವೆ ಇರುವ ನಿರಾಳ ಮೌನದೊಂದಿಗಿನ ಸಹಜ ಸಂಭಾಷಣೆ ಪ್ರಶ್ನಾರ್ಥಕವಾಗಿ ಮೂಡಿದೆ. ಜೀವನದ ಅಪರಿಪೂರ್ಣತೆನಯೂ ಸೂಕ್ಷ್ಮತೆಯೊಂದಿಗೆ ಬೆರೆತಿದೆ.

ಕ್ರೂರ ಪ್ರಶ್ನೆಗಳೇ? ಪ್ರಿಯಾ ಗಂಭೀರ ಉತ್ತರಗಳಿವು.ಎಂಬ ಮಾತು.

ಸಹಜತೆಯಿಂದ ಪ್ರಶ್ನಾರ್ಥಕವಾಗಿ ಕಂಡರೂ ಉತ್ತರಿಸುವ ಮನಸ್ಥಿತಿಗಳನ್ನು ಧ್ವನಿಸುತ್ತವೆ.

ದು.ಸರಸ್ವತಿಯವರ ನೀ ಒಮ್ಮೆಬಾ ಕವಿತೆ

ನಿರೀಕ್ಷೆಯನ್ನು ಕಾಯುವಿಕೆಯ ಮಾರ್ಗದಲ್ಲಿ ವ್ಯಕ್ತಪಡಿಸುತ್ತದೆ.

ಕುಸಿವ ನೆಲವ

ಹುಸಿಯಾಗಿಸುವೆ

ಕುಟುಕು ಜೀವಕೆ

ಗುಟುಕು ನೀಡುವೆ

ಬೆಚ್ಚಿದರೆ

ಕಣ್ಣ ರೆಪ್ಪೆಯಲಿ ಮುಚ್ಚಿಡುವೆ

ಎಂದು

ಕಾದ ಕಂದನ

ಅಕ್ರಂದನ

ಕ್ರಮಿಸಿ ಬರಲಿಲ್ಲವೆ

ನಾನು

.....................................

.....................................

ನೀ ಒಮ್ಮೆ ಬಾ

ಎಂಬ ಮಾತು ನಿರೀಕ್ಷೆಯ ಜೊತೆ ಜೊತೆಗೆ ಮನದ ಎಲ್ಲಾ ತಲ್ಲಣವನ್ನು ಮರೆ ಮಾಚಿ ಅನಿಸಿಕೆ ವ್ಯಕ್ತ ಪಡಿಸುವಂತೆ ಧ್ವನಿಸಿವೆ.

**ಸಮಾಜಿಕ ಆಶಯಗಳು**

ಸಾಮಾಜಿಕ ಕಳಕಳಿಯುಕವಿತೆಗಳಲ್ಲಿ ಪ್ರಮುಖವಾಗಿ ಕಂಡುಬರುತ್ತವೆ.

ಇಲ್ಲಿಯೂ ಸಹ ಸಮಾಜ ಹೆಣ್ಣನ್ನು ನೋಡುವ ರೀತಿ ಮತ್ತು ಬಿ.ಟಿ. ಲಲಿತಾ ನಾಯಕ್ ರವರ ''ಸರಳು ಸರಿಯುವುದು'' ಕವಿತೆಯಲ್ಲಿ ಸಮಾಜವನ್ನು ನೋಡುವ ರೀತಿಯೇ ಪ್ರಮುಖವಾಗಿ ಅಭಿವ್ಯಕ್ತವಾಗಿದೆ.

ತೆರೆದರೆ ಅಪಾಯ
ಹೊರ ಹೋಗದಿರು ಬಾಲೆ
ಕಂಡಷ್ಟೆ ನೋಟ ಸಾಕು
ನೀ ನಿಲ್ಲು ಅಲ್ಲೆ
ಈ ಸೊಲ್ಲು ಇಂದು ನೆನ್ನೆಯದಲ್ಲಿ
ಅಜ್ಜಿ ಅವರಜ್ಜಿ ಮುತ್ತಜ್ಜಿಯರಿಗೂ
ರಕ್ಷಣೆಯ ನೆಪದಲ್ಲಿ
ಸೆರೆ ಹಿಡಿದಿಟ್ಟ ವ್ಯಥೆಯ ಇತಿಹಾಸವಿದು.

ಈ ಸಮಾಜವನ್ನು ನೋಡುವುದು ಸಮಾಜ ಎಂಬ ಮೂರಕ್ಷರದ ಪ್ರತಿಬಿಂಬ ಹೆಣ್ಣನ್ನು ಪರಂಪರೆಯ ಇಕ್ಕಟ್ಟಿನಲ್ಲಿ ಹೇಗೆ ಬಂಧಿಯಂತೆ ಮಾಡಿದೆ ಎಂಬುದು ಇಂದಿಗೂ ಸತ್ಯವಾದ ಸಂಗತಿ. ಆಧುನಿಕ ಯುಗದಲ್ಲಿರುವ ನಮ್ಮನ್ನೂ ಸಹ ನಮ್ಮ ತಾಯಿ , ಅಜ್ಜಿಯಂದಿರ ಪ್ರತೀಕಗಳು ಬಂಧಿಸಿವೆ. ಹೆಣ್ಣಾದವಳು ಹೀಗೆ ಇರಬೇಕು, ಎಂದು ಸಮಾಜ ರೂಪಿಸಿದ ನೀತಿಯನ್ನು ಇಂದಿಗೂ ಪಾಲಿಸಿಕೊಂಡು ಬಂದಿದ್ದೇವೆ.

ಸವಿತಾರವರ '' ಜಾತ್ರೆಯಲ್ಲಿ ಶಿವ''

ಅದೇ ಆ ಶಿವನ ವೇಷಧಾರಿ
ನಾನಿದ್ದ ಬಸ್ಸಿನಲ್ಲಿಯೇ ಇದ್ದ
ನನ್ನೊಂದಿಗೆ ಬಂದಿಳಿದ

ಪ್ಲಾಸ್ಟಿಕ್ ಹಾವು, ತಗಡಿನ ಚಂದ್ರ, ಹುಲಿ ಚಿತ್ರದ ಅರ್ಧಲುಂಗಿ , ಹವಾಯಿ ಚಪ್ಪಲಿ. ಗಿಲೀಟು ಒಡವೆಗಳು, ಆದುನಿಕತೆಯೂ ಒಡತನವನ್ನು ವಿಡಂಬಿಸುವ ಒಂದು ಧಾಟಿ ಇಲ್ಲಿಮೂಡಿದೆ.

ಮೆಲ್ಲನೆ ಬಳಿಸಾರಿ ಗೋಣ ಬಗ್ಗಿಸಿ
ಮಗ ಹಸಿದಿದ್ದಾನೆ.
ಹೆಂಡತಿಗೆ ಖಾಯಿಲೆ ಅಂದ
ಬಾಡಿದ ಮುಖ ಬಸಿದಿತ್ತು ದುಃಖ

ಗಣಪ ಹಸಿದಿದ್ದಾನೆ

ಗಿರಿಜೆಗೆ ಖಾಯಿಲೆ

ಹೆಂಡತಿ ಮಕ್ಕಳಿಗಾಗಿ

ಶಿವನಲ್ಲದೆ ಭವಿ ಅಳುವನೇ?!

ಇಲ್ಲಿರುವ ಕೃತಕ ಆಭರಣಗಳು ವಾಸ್ತವ ಮತ್ತು ಬಣ್ಣದ ತಳುಕಿನ ಪ್ರಪಂಚವನ್ನು ಭಿನ್ನ ಮಗ್ಗುಲುಗಳಲ್ಲಿ ತೋರಿಸಿಕೊಡುತ್ತವೆ. ಈ ಕವನ ವೇಶಧಾರಿಯ ಸಂಭ್ರಮದ ಸ್ಥಿತಿಯನ್ನಷ್ಟೇ ವರ್ಣಿಸುತ್ತಿಲ್ಲ ಅವನ ಸದ್ಯದ ಸಾಮಾಜಿಕ,ಆರ್ಥಿಕ ಸ್ಥಿತಿಯನ್ನು ಅದು ಮರೆ ಮಾಚುವುದಿಲ್ಲ. ಆದರೆ ನಿರೂಪಕಿ ಈ ವೇಶಧಾರಿಯನ್ನು ಕೇವಲ ಬಡವ ನೋರ್ವನ ಬೇಡುವ ಕೈ, ಹಸಿದ ಹೊಟ್ಟೆಯಾಗಿ ಮಾತ್ರ ಬಿಂಬಿಸುತ್ತಿಲ್ಲ. ಒಂದೇ ಕ್ತಿತ್ವದೊಳಗಣ ಹಲವು ಸಾಧ್ಯತೆಗಳನ್ನು ಅವುಗಳೆಲ್ಲ ಅಭಿನ್ನ ಎಂಬ ಹದದಲ್ಲಿ ಕವನ ಸೂಕ್ಷ್ಮವಾಗಿ ಹಣೆದಿದೆ. ಹಾಗಾಗಿ ನಿರೂಪಕಿಯ ಅನುಭವ ನಿಧ- ನಿಧಾನವಾಗಿ ವಿಸ್ತಾರಗೊಳ್ಳುತ್ತಾ ಹೋಗುತ್ತವೆ. ಅದು ಕವನದ ಕೊನೆಯ ಹಂತಕ್ಕೆ ಬರುತ್ತಿದ್ದಂತೆ ಕ್ರಮೇಣ ಅನುಭಾವ ಎಂಬ ಸ್ಥಿತಿಯನ್ನು ತಲುಪಿ ಬಿಡುತ್ತದೆ.

ಬೇಡುವ ಬಡವನ ಕೈ ರುದ್ರನೋಡಿದ್ದ ಬೊಗಸೆ ಎಂದು ತೋರಿಸುವ ನಿರೂಪಕಿ ವಾಸ್ತವಿಕ ಎಲ್ಲಾ ಸಮಸ್ಯೆಗಳನ್ನು ವಿಡಂಬಿಸುತ್ತಾ ಅನುಭವದೊಂದಿಗೆ ಎಲ್ಲಾ ಸೂಕ್ಷ್ಮತೆಯನ್ನು ದಾಟಿ ಅನುಭಾವದೊಂದಿಗೆ ಮೈ ತಳೆಯುತ್ತದೆ. ಒಟ್ಟಾರೆಯಾಗಿ ಇಹ- ಪರ ಮುಂತಾದ ಆಲೋಚನೆಗಳು ವಾಸ್ತವದ ನೆಲೆಗಟ್ಟಿನಲ್ಲಿ ಒಂದೇ ಆಗಿ ಬಡತನದ ಹಸಿವು, ಜೀವನದ ನೋವುಗಲು ಆಧುನಿಕರೊಂದಿಗೆ ಸಮೀಕರಣಗೊಂಡು ಅನುಭವವಾಗುವುದರ ಜೊತೆಯಲ್ಲೇಅನುಭಾವದ ಸ್ಥಿತಿಯನ್ನು ತಲುಪಿದೆ. ಈ ಕವನದ ಒಟ್ಟಾರೆ ತಾತ್ಪರ್ಯ ದೈವಿಕತೆಯನ್ನು ಮಾನವೀಯತೆಯ ನೆಲೆಯಲ್ಲಿ ನೋಡುತ್ತಾ ಸಾಮಾಜಿಕ ಸಮಸ್ಯೆಗಲಿಗೆ ಸ್ಪಂದಿಸುವ ಬಗೆಯನ್ನು ಪೌರಾಣಿಕತೆಯ ಪಾತ್ರಗಳಲ್ಲಿ ಕಟ್ಟಿಕೊಟ್ಟಿರುವುದು ಮನೋಜ್ಞವಾಗಿದೆ.

ಲಲಿತಾರವರ "ಬಿತ್ತರ" ಕವಿತೆಯಲ್ಲಿ

ಇದರ ಸೋಗೆ ಗರಿಗಳೂ ಅತ್ತು ಕರೆಯುತ್ತಾವೆ.

ಕಣ್ಣೀರಿಡುತ್ತಾವೆ. ತಟ ತಟನೆ ಹನಿ ಸುರಿಯುತ್ತವೆ.

ತಟ್ಟಿ ಎಬ್ಬಿಸುತ್ತಾವೆ

ಇದರ ಕೌದಿ ಕಂಬಳಿಗಳನ್ನು ತೋಯಿಸಿ

ಎಣ್ಣೆ ಕಾಣದ ಒಣ ತಲೆಗೆ ಎರೆದೆರೆದು ಮೀಯಿಸಿ

ಸಾಕ್ಷ್ಯಾಧಾರ ಸಹಿತ ಸುದ್ದಿ ವಿತರಿಸುತ್ತಾವೆ.

ದಾಂಪತ್ಯದ ಹದ ತಪ್ಪಿದರೆ ಸಮಾಜದ ಕ್ರೂರ ನೋಟ ಅವಳನ್ನು ಹೇಗೆ ಕಾಡುತ್ತದೆ ಎಂಬ ಚಿತ್ರಣವೇ ಪ್ರಧಾನ ಇನ್ನೂ ಕೆಲವು ಕವಿತೆಗಳು ಹೆಣ್ಣನ್ನು ಸಮಾಜದ ಭೋಗದ ವಸ್ತುವಾಗಿಯೂ ಪರಿಗಣಿಸುತ್ತವೆ. ಅವರ ಸತ್ವವನ್ನೆಲ್ಲ ಅಲ್ಲಗೆಳೆಯುವ ಚಿತ್ರಣ ಇಲ್ಲದೆ ವ್ಯಂಗ್ಯ ವಿಡಂಬನೆಯೊಂದಿಗೆ ಬದುಕಿನ ಚಿತ್ರಣ ಮುಖ್ಯವಾಗಿದೆ.ಉಳ್ಳವರು ಮತ್ತು ಇಲ್ಲದವರ ನಡುವಿನ ಬದುಕು ಹೇಗಿರುತ್ತದೆ ಎಂಬುದನ್ನು ಕವಿತೆ ಪ್ರತಿಬಿಂಬಿಸುತ್ತದೆ. ಬಡವರಿಗೆ ನಿರಾಶ್ರಿತರ ಬದುಕನ್ನು ಸುದ್ದಿ ಪತ್ರಿಕೆಗಳಲ್ಲಿ ನೋಡುವ ಚಟ. ಬಡವರ ಬದುಕನ್ನು ಮಹಡಿಯ ಮೇಲೆ ನಿಂತು ನೋಡಿದಾಗ ಹೇಗೆ ಕಾಣುತ್ತದೆ ಎಂಬುದು ಎಲ್ಲರಲ್ಲೂ ಪ್ರಶ್ನಾರ್ಥಕವಾಗಿ ಮೂಡಿದೆ. ಇದು ಇಂದು ನೆನ್ನೆಯ ಸಮಸ್ಯೆಯಲ್ಲ , ಶತಮಾನಗಳಿಂದ ಬಂಡವಾಳ ಶಾಹಿಗಳ ಆಕ್ರಮಣ ಯಾವ ರೀತಿಯದು ಎಂಬುದು ಕವಿತೆಯಲ್ಲಿ ನೋಡಬಹುದು.

**ದು. ಸರಸ್ವತಿಯವರ "ಆಶೆ ಕಾದಿದೆ"**

ಹೊರಗಿನ ಕುದಿತಕ್ಕೆ
ಒಳಗೆ ಚಡಪಡಿಸಿ
ಸಾಯುತ್ತವೆ ಪಾಪ
ಜೀವ ತಂತಿಯಲಿ
ಸಾವಿನೆಳೆಗಳ ಕಸೂತಿ
ಹೆಣೆದ ಕುಶಲ ಕರ್ಮಿ ಯಾರೋ
ಹೆಣಿಗೆಯ ಮರ್ಮವೇನೋ
ಒಂದರೊಳಗೊಂದು ಹೆಣೆದುಕೊಂಡ
ಗೂಡಿನ ಎಳೆಗಳು
ಬಿಡಿಸಿ ದಂತೆ ಸಿಕ್ಕು
ಯಾರಾದರೂ
ಹರಿದು ಬರಬಾರದೆ

ಇದು ಎಲ್ಲಾ ದಲಿತರ, ಇಲ್ಲದವರ ಹಾಗೂ ಸ್ತ್ರೀಯರ ಮನದ ಇಂಗಿತವನ್ನು ಆಶೆ ಮತ್ತು ಆಶಯದ ರೂಪದೊಂದಿಗೆ ಸಮೀಕರಣಗೊಂಡಿದೆ.

ಸಂಧ್ಯಾರವರ ವಾಸ್ತವ ಕವಿತೆ

ಇಲ್ಲಿ ಎಂದಿನಿಂದಲೂ ಇವೆ

ಎಣ್ಣೆ ಕಾಣದ ತಲೆಗಳು ಮೆಟ್ಟನೂ ಮೆಟ್ಟದ ಕಾಲುಗಳು
ದುಡಿಯಲೆಂದೇ ಹುಟ್ಟಿದ ರಟ್ಟೆಗಳು, ತಂಗಳು ಕಾಣದ ಹೊಟ್ಟೆಗಳು
ಮಣ್ಣು ಗೂಡಿದ ಕನಸುಗಳು ಮುರುಗಟ್ಟಿದೆ ಎದೆ ಹೃದಯಗಳು.
ದಲಿತರ ಚಿತ್ರಣವನ್ನು ವಾಸ್ತವಿಕತೆಯ ನಲೆಯಲ್ಲಿ ಕಟ್ಟಿಕೊಟ್ಟಿದೆ.

**ಬಿ.ಟಿ.ಲಲಿತಾ ನಾಯಕ್‌ರ "ಶಿಲಾವಾಣಿ" ಕವಿತೆ**

ಪಟ್ಟಾಭಿಷೇಕ
ಕ್ಷೀರಾಭಿಷೇಕ
ಬೇಡವೆನಗೆ
ಆಗಸದ ಜೀವರಸ
ಧರೆ ತೊಳೆಯ ಬಂದಾಗ
ಶುದ್ಧಿಗೊಳ್ಳುವೆ
ಸಲ್ಲ ಈ ಚಿಂತೆ ನಿಮಗೆ
ದೇವಟಿಗೆಯ ಕುಡಿಯಂತ
ತತ್ವ ಸಿದ್ಧಾಂತಗಳು
ಹೊತ್ತಿ ಉರಿದವು
ಗಲಭೆ ದೊಂಬಿಯ ಬೆಂಕಿಯಲ್ಲಿ

ಹೆಣ್ಣು ಎಂದರೆ ಮನೆಗೆ ಸೀಮಿತವಾದವಳು ಎಂದು ನೋಡುತ್ತಿದ್ದ ಕಾಲದಲ್ಲಿ ಅವಳ ಆಂತರಿಕ ಜಗತ್ತನ್ನು ಭೇದಿಸಿ ಅವಳ ಮಾನಸಿಕ ಆಲೋಚನೆಗೆ ಸ್ಫೂರ್ತಿ ನೀಡಿದ್ದು ಕಾವ್ಯ.

ಮಹಿಳೆ ಪೂಜನೀಯಳು ಎಂದು ದೈವತ್ವದ ನೀತಿಗೇರಿಸಿದ ಸಮಾಜ ಅವಳನ್ನು ಮೌನಗೌರಿಯಾಗೇರಿಸಿದ ಸಮಾಜ ಅವಳನ್ನು ಮೌನಗೌರಿಯಾಗೇ ನೋಡಲು ಬಯಸಿದುದು ಸತ್ಯ ಸಂಗತಿ. ನಾಲ್ಕುಗೋಡೆಗಳ ನಡುವೆ ಬಂಧಿಯಾದ ಹೆಣ್ಣು ಪಾರಂಪರಿಕವಾದ ಹಾಡು, ಕೀರ್ತನೆ, ಇಷ್ಟಕ್ಕೇ ಸೀಮಿತಳಾಗಿದ್ದಳು. ಅವಳ ಭಾವನಾ ಪ್ರಪಂಚಕ್ಕೆ ಸ್ಪಂದನೆ ಎಂಬುದಿರಲಿಲ್ಲ. ಎಂಬ ಮಾತುಗಲು ಸತ್ಯವಾದುದಾದರೂ ಹೆಣ್ಣಿಗೆ ನಿಜವಾಗಿ ಜೀವಂತಿಕೆ ಎಂಬುದು ಜಾನಪದ ಸಾಹಿತ್ಯವಾದ ಎನ್ನಬಹುದು. ಬದುಕಿಗೆ ಜೊತೆಯಾಗೇ ಅಂಟಿಕೊಂಡು ಬಂದ ಕಷ್ಟ, ನಷ್ಟ ನೋವು- ನಲಿವುಗಳಿಗೆಸ್ಪಂದಿಸಿದ್ದು ಈ ಕಾವ್ಯ ಮಾಧ್ಯಮ ಎನ್ನಬಹುದು. ಮದುವೆಯಾಗಿ ಕಷ್ಟ ಪಡುವ ಹೆಣ್ಣಿನ ಬದುಕು ಒಂದೆಡೆಯಾದರೆ , ಮದುವೆಯಾಗದೇ ಉಳಿದ ಹೆಣ್ಣಿನ ಮಾನಸಿಕ ನಿವೇದನೆ ಯಾವ ಬಗೆಯದು ಎಂಬುದನ್ನು ಇಂದಿನ

ಆಧುನಿಕ ಮಹಿಳಾ ಕವಿತೆ ತನ್ನದೇ ನೆಲೆಗಟ್ಟಿನಲ್ಲಿ ಗುರ್ತಿಸಿದೆ. ಪುರುಷನಿಗೆ ಸೌಂದರ್ಯದ ಸಂಕೇತವಾಗಿ ಮಾತ್ರಹೆಣ್ಣು ಏಕೆ ಕಾಣುತ್ತಾಳೆ? ಅದೇ ಒಬ್ಬ ಹೆಣ್ಣಿಗೆ ಅವಳ ಒಳ ಆಂತರಿಕ ಮೌಲ್ಯಗಳು ಹೇಗೆ ಸ್ಪಂದಿಸುತ್ತವೆ ಎಂಬುದು ಕುತೂಹಲಕರವಾದ ವಿಷಯ. ಪುರುಷ ಮೌಲ್ಯದಲ್ಲಿ ಚಿತ್ರಿತ ಗೊಂಡ ಹೆಣ್ಣು ಕಾವ್ಯವಾಗಿ, ಕಥೆಯಾಗಿ ಕಾಂದಬರಿಯ ಪಾತ್ರಗಳಾಗಿ ಕಲ್ಪನೆಯ ಪ್ರತಿಬಿಂಬವಾಗೇ ಉಳಿಯುತ್ತಾಳೆ. ಕೆಲವೊಂದು ಸಾರಿ ಕರುಣೆಯ ಪಾತ್ರವಾಗೋ, ಅಸಹಾಯಕಗಳಾಗೋ ತಿರಸ್ಕೃತಳಾಗೋ ಮಾತ್ರ ಚಿತ್ರಿತವಾಗುವ ಹೆಣ್ಣಿನ ಮೌಲ್ಯ ಇಷ್ಟ ಸೀಮಿತವೇ ಎನಿಸುತ್ತದೆ. ಅಂತಹ ಒಂದು ಸಂದರ್ಭದಲ್ಲಿ ಕಾವ್ಯ ಮೂರ್ತಿಯನ್ನು ಬಹಳ ಆಪ್ತವಾಗಿಸಿಕೊಂಡದ್ದು ಕಾವ್ಯ ಮಾದ್ಯಮ

ಇಂದಿನ ಆಧುನಿಕ ಎಷ್ಟೋ ಲೇಖಕಿಯರು ಸ್ವಗತದ ಮಾದರಿಯಲ್ಲಿ ಕವಿತೆಗಳ ಮೂಲಕ ತಮ್ಮಲ್ಲಿನ ಆಂತರಿಕ ಮನಸ್ಸನ್ನು ಕಾವ್ಯದ ಮೂಲಕ ವ್ಯಕ್ತ ಪಡಿಸಿದ್ದಾರೆ. ವಾಸ್ತವಿಕ ನೆಲೆಗಟ್ಟಿನ ಅನುಭವಗಳು ಅಭಿವ್ಯಕ್ತಿಯೇ ಕಾವ್ಯ ಎಂದು ತೋರಿಸಿಕೊಟ್ಟ ಕ್ರಿಯೆ ಸಾಮಾನ್ಯವಾದುದಲ್ಲ. ತಮ್ಮೆಲ್ಲ ನೋವು, ನಲಿವುಗಳ ಮೂಲಕ ಇಂದಿನ ಎಲ್ಲ ತಲೆಮಾರುಗಳ ಹೆಣ್ಣಿನ ಒಳ ಮನಸ್ಸುಗಳಿಗೆ ಈ ಕವಿತೆಗಳು ಪ್ರತಿ ಸ್ಪಂದನೆ ನೀಡುತ್ತಿರುವುದು ಗಮನಾರ್ಹವಾಗಿವೆ.

ನಮ್ಮ ಎಲ್ಲಾ ಲೇಖಕಿಯರು ತಮ್ಮ ಅಸಹಾಯಕತೆಯನ್ನು ಕವಿತೆಗಳ ಮೂಲಕ ವ್ಯಕ್ತ ಪಡಿಸುವುದರೊಂದಿಗೆ ಅದರ ಜೊತೆಯಲ್ಲೇ ಇಂದಿನ ಸಮಾಜಕ್ಕೆ ಹೆಣ್ಣಾದವಳು ಪ್ರತಿ ಸ್ಪಂದಿಸುವ , ಅಸ್ತಿತ್ವವನ್ನು ಕಂಡು ಕೊಳ್ಳುವ ಕ್ರಮವನ್ನು ಹೇಳುತ್ತಿದ್ದಾರೆ.

ಒಟ್ಟಾರೆಯಾಗಿ ಕಾವ್ಯ ಮಾದ್ಯಮವನ್ನು ಆಪ್ತವಾಗಿಸಿಕೊಂಡ ನಮ್ಮ ಆಧುನಿಕ ಎಲ್ಲ ಲೇಖಕಿಯರೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಾವ್ಯ ಮಾಧ್ಯಮವನ್ನು ಹೆಚ್ಚು ಪ್ರೌಢವಾಗಿಸಿದ್ದಾರೆ. ಅವರ ಎಲ್ಲಿ ಆಲೋಚನೆ, ಅಭಿವ್ಯಕ್ತಿ ಮಾಧ್ಯಮಗಳೂ ಕಾವ್ಯದ ಮೂಲಕ ಹರಿದು ಬಂದಿದ್ದು ಸಂತಸಕರ ಸಂಗತಿ ಒಟ್ಟಾರೆಯಾಗಿ ಕಾವ್ಯ ಕ್ಷೇತ್ರದಲ್ಲಿ ಮಹಿಳೆಯ ಆಂತರಿಕ ಜಗತ್ತು ಮತ್ತು ಅಸ್ತಿತ್ವದ ಹುಡುಕಾಟವೆಂಬುದು ಬಹಳ ಪ್ರಮುಖ ಹಂತ ಎನ್ನಬಹುದು.

# ಅಧ್ಯಾಯ- 5

## ಸಮಾರೋಪ

ಕಾವ್ಯ ಮಾಧ್ಯಮವೆಂಬುದು ಮಹಿಳಾ ಸಾಹಿತ್ಯ ಲೋಕಕ್ಕೆ ಹತ್ತಿರವಾದ ಮತ್ತು ಪ್ರಿಯವಾದಂತಹ ಮಾಧ್ಯಮ ಎನ್ನಬಹುದು. ಮಹಿಳೆಯ ಆಂತರಿಕ ಜಗತ್ತು ಮತ್ತು ಅಸ್ತಿತ್ವದ ಹುಡುಕಾಟವನ್ನು ಕಾವ್ಯ ಮಾಧ್ಯಮದಿಂದ ಸ್ಪಷ್ಟವಾಗಿ ತಿಳಿದುಕೊಳ್ಳಲು ಸಹಾಯಕವಾಗಿದೆ. ಹೀಗಾಗಿ ನಮ್ಮ ಹಲವಾರು ಲೇಖಕಿಯರು ತಮ್ಮೊಳಗೆ ಮೂಡಿದ ಹಲವು ಭಾವನೆಗಳನ್ನು ಮೇಳೈಸಿಕೊಂಡು ಸ್ವಗತದ ಮಾದರಿಯಲ್ಲಿ ಕಾವ್ಯ ಮಾಧ್ಯಮವನ್ನು ರೂಢಿಸಿಕೊಂಡ ಬಗೆ ಅಮೋಘವಾದುದು.

ಹೆಣ್ಣು ತನ್ನ ಸುತ್ತ ಮುತ್ತಲಿನ ಆಗು ಹೋಗುಗಳನ್ನು ಹೇಗೆ ನೋಡುತ್ತಾಳೆ. ಹೆಣ್ಣಾಗಿ ಅವಳ ಅನಿಸಿಕೆಗಳನ್ನು ಅವಳು ಇದುವರೆಗೆ ಮನದಲ್ಲಿ ಅಡಗಿಸಿದ್ದೇನು? ಎಂಬುದನ್ನು ಈಕಾವ್ಯ ತೋರಿಸತೊಡಗಿದೆ. ನಮ್ಮ ಕವಯತ್ರಿಯರ ಆಂತರಿಕ ಜಗತ್ತು ಎಂದು ಏನು ಹೇಳುತ್ತೇವೋ ಅದು ಇಡೀ ಸ್ತ್ರೀ ಸಮೂಹದ ದನಿಯೇ ಆಗಿದೆ ಎಂಬುದನ್ನು ಗಮನಿಸಬೇಕು . ಹೆಣ್ಣನ್ನು ಕುರಿತಂತೆ ಪುರುಷ ಸಮಾಜ ನಿರ್ಮಿಸಿರುವ ಮಹಿಳಾ ಕಾವ್ಯದ ವಸ್ತು ಮತ್ತು ಸ್ವರೂಪವನ್ನು ನಿರ್ಧರಿಸಿವೆ. ಪುರುಷ ಸಮಾಜವನ್ನು ಕುರಿತ ಟೀಕೆ, ಪುರುಷನಿಂದಾಗುವ ಶೋಷಣೆಗಳು , ಪ್ರೀತಿ, ಪ್ರೇಮ, ಪ್ರಣಯದಂತಹ ವಿಷಯಗಳು ಈ ಕವನಗಳ ಪ್ರಧಾನ ವಸ್ತು.

ಪುರುಷನ ಅಹಮಿತೆಗೆ ಸಿಲುಕಿ ನಲುಗಿ ಹೋಗುವ ಪ್ರೀತಿ , ಪುರುಷನ ದ್ರೋಹದಿಂದ ಉಂಟಾದ ದುಃಖ ನೋವು, ವಿಶ್ವಾಸವಿಲ್ಲದ ಸಮಾಜ ಮುಂತಾದ ಅಂಶಗಳು ಕಾವ್ಯವನ್ನು ಸೇರಿಕೊಳ್ಳುತ್ತವೆ. ದಾಂಪತ್ಯದ ಅನುಭವಗಳಲ್ಲಿನ ಪುರಷನ ದರ್ಪ,ದೌರ್ಜನ್ಯ, ಅಹಂಕಾರಗಳಿಂದಾಗಿ ಹೆಣ್ಣಿನ ಕನಸುಗಳು ಬಾಡಿ ಹೋಗುವುದರ ಚಿತ್ರಣವಿದೆ. ನಿರೀಕ್ಷೆಗಳು ಕೈಗೂಡದ ಮತ್ತು ಸಿಕ್ಕಿದ್ದರ ಬಗ್ಗೆ ತೃಪ್ತಿ ಪಟ್ಟುಕೊಳ್ಳಬೇಕಾದ ಅಸಹಾಯಕತೆಗಳ ಚಿತ್ರಣ ಕವಿತೆಗಳಲ್ಲಿ ಮೂಡಿ ಬಂದಿವೆ. ಸೀತೆ, ಸಾವಿತ್ರಿ, ಅಹಲ್ಯೆ ಮುಂತಾದ ಪೌರಾಣಿಕ ಮಹಾಕಾವ್ಯಗಳ ಮಾದರಿಗಳ ಪಾತಿವ್ರತ್ಯ, ಶೀಲ , ವಿದೇಯತೆಯಂತಹ ಪುರುಷ ಪ್ರಧಾನ ಸಮಾಜ ಸ್ಥಾಪಿತ ಆದರ್ಶಗಳಾಗೇ ನಮ್ಮನ್ನು ಕಟ್ಟಿಹಾಕಿವೆ. ಈ ಮಾದರಿಗಳ ಚೌಕಟ್ಟಿನಿಂದ ಬಿಡಿಸಿಕೊಂಡು ಹೆಣ್ಣು ಸ್ವಂತತ್ರ್ಯ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಬೇಕು ಎಂಬ ಆಶಯವೂ ಕವಿತೆಗಳಲ್ಲಿ ವ್ಯಕ್ತವಾಗಿದೆ.

ಒಟ್ಟಾರೆಯಾಗಿ ಮಹಿಳಾ ಕಾವ್ಯ ಬಿಡಿಸಿದ ಆಂತರಿಕ ಜಗತ್ತುಮತ್ತು ಅಸ್ತಿತ್ವದ ಹುಡುಕಾಟ ಇಂದಿನ ಎಷ್ಟೋ ಹೆಣ್ಣುಗಳ ಬದುಕಿನ ಒಳ ಅರಿವನ್ನು ತಿಳಿದುಕೊಳ್ಳಲು ಸಹಾಯವಾಗಿದೆ.

ಕಾವ್ಯದ ಮೂಲಕ ತನ್ನತನದ ಹುಡುಕಾಟವನ್ನು ಕಂಡುಕೊಂಡ ಲೇಖಕಿಯರು ಮಹಿಳೆಯ ಭಿನ್ನ ಆಲೋಚನಾ ಜಗತ್ತನ್ನು ಕಾವ್ಯದ ಮೂಲಕ ತಿಳಿಯ ಪಡಿಸಿದ್ದು ಮುಖ್ಯವಾದ ಅಂಶ ಎಂದು ಹೇಳಬಹುದು.

ಹೀಗಾಗಿ ಮಹಿಳಾ ಕಾವ್ಯ ಎನ್ನಬಹುದು. ಓದುಗರ ಆಲೋಚನಾ ಪರಿಯನ್ನು ವಿಭಿನ್ನ ಮಗ್ಗಲುಗಳಲ್ಲಿ ತೂಗಿ ನೋಡುತ್ತದೆ. 1975 ರಿಂದೀಚೆಗೆ ಮಹಿಳಾ ಕಾವ್ಯ ವೆನ್ನುವುದು ಸಾಹಿತ್ಯದ ಇಡೀ ಎಲ್ಲ ವಲಯದ ಕೇಂದ್ರ ಬಿಂದುವಾಗಿತ್ತು ಮಹಿಳೆಯ ಮಾನಸಿಕ ಸ್ಥೈರ್ಯವನ್ನು ಒಂದು ರೀತಿಯ ಪ್ರೌಢಿಮೆಯ ಉತ್ತುಂಗಕ್ಕೆ ಕೊಂಡೊಯ್ಯುದ್ದು ಈ ಮಾಧ್ಯಮವೇ ಎನ್ನಬಹುದು.

ಪುರುಷ ಮೌಲ್ಯಗಳಲ್ಲೇ ಉಳಿದ ಎಷ್ಟೋ ವಿಷಯಗಳನ್ನು ಈ ಮಹಿಳಾ ಕಾವ್ಯವೆನ್ನುವುದು ಕೆದಕುತ್ತಾ, ಪ್ರಶ್ನಿಸುತ್ತಾ ಹೋದುದು ಶ್ಲಾಘನೀಯವಾದ ವಿಚಾರ ಎನ್ನಬಹುದು. ಹೀಗಾಗಿ ಈ ಕವಿತೆಗಳಲ್ಲಿ ವ್ಯಕ್ತವಾದ ಎಷ್ಟೋ ವಿಚಾರಗಳು ತುಂಬಾ ಸತ್ವಯುತವಾದವು ಎನ್ನಬಹುದು. ಹೀಗಾಗಿ ಕಾವ್ಯ ಮಾಧ್ಯಮವನ್ನು ಒಳಗೊಂಡ "ನನ್ನ ಆಧುನಿಕ ಮಹಿಳಾ ಕಾವ್ಯ" **ಸ್ತ್ರೀ ಸಂವೇದನೆಯ ನೆಲೆಗಳು :** ಎಂಬ ಕಿರು ಪ್ರಬಂಧ ಮಹಿಳಾ ಕಾವ್ಯ ಲೋಕದಲ್ಲಿನ ಸ್ತ್ರೀ ಸಂವೇದನೆಗಳನ್ನು ತಿಳಿಯ ಪಡಿಸುವ ನನ್ನ ಪ್ರಯತ್ನವನ್ನು ಸಮರ್ಥವಾಗಿ ಬಳಸಿಕೊಂಡಿದ್ದೇನೆ.

## ಬಳಸಿಕೊಂಡ ಕವಿತಾ ಸಂಕಲನಗಳು

| ಲೇಖಕಿಯ ಹೆಸರು | | ಕವಿತಾ ಸಂಕಲನ | ಪ್ರಕಟಣೆಯಾದ ವರ್ಷ |
|---|---|---|---|
| 1) ಬಿ.ಟಿ. ಲಲಿತಾ ನಾಯಕ್ | : | ಸವಾ-ಸೇರು | 2005 |
| | | ಇದೇ ಕೂಗು -ಮತ್ತೆ ಮತ್ತೆ | 1986 |
| | | ಒಡಲ ಬೇಗೆ | 1999 |
| 2) ಮಾಲತಿ ಪಟ್ಟಣ ಶೆಟ್ಟಿ | : | ಮೌನಕರಗುವ ಹೊತ್ತು | 1999 |
| | | ಕವಿತೆ 1996 | 1996 |
| | | ತಂದೆ ಬದುಕು ಗುಲಾಬಿ | 1988 |
| | | ಗರಿಗೆದರಿ | 1983 |
| | | ದಾಹತೀರ | 1994 |
| 3) ಪ್ರತಿಭಾ | | ರಸ್ತೆಯಂಚಿನ ಗಾಡಿ | 1991 |
| 4) ಹೇಮಾ | | ಹೊಸಹಾಡು | 1986 |
| | | ವಿರಹೋತ್ಸವ | 1983 |
| 5) ಶಶಿಕಲಾ | | ಹೆಂಗಹೇಳಲೀ ಗೆಳತಿ | 1989 |
| | | ಮಧ್ಯಂತರದ ಚಂದುರಂಗದ ಗೀತೆ | 2004 |
| 6) ಸರಸ್ವತಿ -ದು | | ಜೀವ ಸಂಪಿಗೆ | 2006 |
| | | ಹೆಣೆದರೆ ಜೇಡನಂತೆ | 1997 |
| 7) ಸವಿತಾ ನಾಗಭೂಷಣ | | ಹೊಳೆ ಮಗಳು | 1996 |
| 8)ಡಾ. ಕೆ. ಆರ್. ಸಂಧ್ಯಾರೆಡ್ಡಿ | | ಮೂವತ್ತೈದರ ಹೊಸ್ತಿಲು | 1990 |
| | | ಈ ಪ್ರೀತಿಯೊಳಗೆ | 1996 |
| 9) ಹೆಚ್. ಎಲ್.ಪುಷ್ಪ | | ಅಮೃತಮತಿ ಸ್ವಗತ | 1992 |
| | | ಗಾಜುಗೋಳ | 1999 |
| 10) ಮಮತಾ ಜಿ. ಸಾಗರ | | ಕಾಡ ನವಿಲಿನ ಹೆಜ್ಜೆ | 1998 |

# ಗ್ರಂಥ ಋಣ


1) ಹೊಸಹೆಜ್ಜೆ — ಸಂ- ನರಹಳ್ಳಿ ಬಾಲಸುಬ್ರಹ್ಮಣ್ಯ, ವೀಣಾ ಶಾಂತೇಶ್ವರ — ಕನ್ನಡ ಸಾಹಿತ್ಯ ಪರಿಷತ್ತು

2) ಮಹಿಳೆ : ಬಿಡುಗಡೆಯ ಹಾದಿಯಲ್ಲಿ — ಎನ್.ಗಾಯತ್ರಿ — ನವಕರ್ನಾಟಕ ಪ್ರಕಾಶನ

3) ಸ್ತ್ರೀವಾದ : — ಡಾ. ಹೆಚ್.ಎಸ್. ಶ್ರೀಮತಿ — ಕ. ವಿ.ವಿ. ಹಂಪಿ

4) ಕನ್ನಡ ಕಾವ್ಯ ಕಂಡ ಹೆಣ್ಣು — ಡಾ. ಸಿ.ವೀರಣ್ಣ — ಶಕ್ತಿ ಮುದ್ರಣ ಮತ್ತು ಪ್ರಕಾಶನ

5) ಮಹಿಳಾ ಜಾನಪದ — ಡಾ. ಕೆ.ಆರ್. ಸಂಧ್ಯಾರೆಡ್ಡಿ — ಕನ್ನಡ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ

6) ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇಧನೆಯ ಸ್ವರೂಪ — ಸಂ. ಸಮಿತಿ ಕ.ಸಾ. ಅ. (ಬರಗೂರು ರಾಮಚಂದ್ರಪ್ಪ)

7) ಮಹಿಳಾ ವಿಷಯ — ಮಮತಾ ಜಿ. ಸಾಗರ — ಇಳಾ ಪ್ರಕಾಶನ

8) ಮಹಿಳಾ ಸಾಹಿತ್ಯ ಚರಿತ್ರೆ — ಸಂ. ಲೇಖಕಿಯರು — ಹಂಪಿ ವಿ.ವಿ. ಹಂಪಿ

9) ವಚನ ಸಾಹಿತ್ಯ ಮತ್ತು ಸ್ತ್ರೀತ್ವದ ಕಲ್ಪನೆ — ಹೆಚ್.ಎಲ್. ಪುಷ್ಪ — ಅಕ್ಕ ಪ್ರಕಾಶನ

10) ಲೇಖಾ ಲೋಕ ಕ.ಲೇ.ಸಂ. — ಮೂರು ಮತ್ತು ನಾಲ್ಕು, ವಿವೇಕ ಶಾನುಭೋಗ್ — ಕನ್ನಡ ಲೇ.ಸಂಘ, ಬೆಂಗಳೂರು

11) ದೇಶಾಕಾಲ — ಸಂಧ್ಯಾರೆಡ್ಡಿ — ಕ.ಲೇ. ಸಂ. ಬೆಂಗಳೂರು

12) ಪಶ್ಚಿಮದ ಸ್ತ್ರೀ ವಾದಿ ವಿಮರ್ಶಾ ಪಂಥಗಳು — ಡಾ. ಬಿ.ಎನ್. ಸುಮಿತ್ರಾಬಾಯಿ — ಕ.ವಿ.ವಿ. ಹಂಪಿ

13) ಅವಲೋಕನ — ಸಾಹಿತ್ಯ ಮಾಲೆ — 2003

14) ದಲಿತ ಕಾವ್ಯ — ಸಂಪಾದಕ ಮಂಡಲಿ — ಕೆ.ಬಿ.ಸಿದ್ದಯ್ಯ, ನಟರಾಜ್ ಬೂದಾಳು